

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೨ ನವೆಂಬರ್ ೨೦೦೬ ಸಂಚಿಕೆ ೧೧

ಸುವರ್ಣ ಕರ್ನಾಟಕ
ರಾಜ್ಯೋತ್ಸವ
ಶುಭಾಶಯಗಳು

'ರಾಷ್ಟ್ರಕವಿ' ಪ್ರಶಸ್ತಿ ಪುರಸ್ಕೃತ

## ಡಾ. ಜಿ.ಎಸ್. ಶಿವರುದ್ರಪ್ಪನವರು








ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104






॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೨ ನವೆಂಬರ್ ೨೦೦೬ ಸಂಚಿಕೆ : ೧೧

## ಒಳಪುಟಗಳಲ್ಲಿ ........................




ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೦೦/- ಆಜೀವ ಸದಸ್ಯತ್ವ ರೂ. ೧೦೦೦/-
ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ಇಪ್ಪತ್ತೈದು ಧರೆಯೊಳಗೆ ಮುಪ್ಪುರವಿಪ್ಪುದಕಂಡೆನಯ್ಯಾ*
*ಮುಪ್ಪುರದೊಳಗೆ ಸಪ್ತೇಳು ಸಾಗರ ಸುತ್ತಿ ಹರಿದು*
*ಸರ್ವರ ತಲೆಯನೆತ್ತ ಲೀಸವು ನೋಡಾ*
*ಸಪ್ತೇಳುಸಾಗರವ ಒಂದು ಕಪ್ಪೆ ಕುಡಿದು*
*ಸಾಗರವ(ಱ) ತು.*
*ಕಪ್ಪೆ ಸತ್ತು, ಇಪ್ಪತ್ತೈದು ಧರೆಯಳಿದು*
*ಮುಪ್ಪುರ ಬೆಂದುದ ಕಂಡೆನಯ್ಯ*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.*

ಪಂಚವಿಂಶತಿ ತತ್ವಯುಕ್ತವಾದ ದೇಹವೆಂಬುರ್ವಿಯಲ್ಲಿ ತನುತ್ರಯ ಸಂಬಂಧವಾಗಿರ್ಪುದನು ಜ್ಞಾನ ದೃಕ್ಕಿನಿಂದ ನಿದರ್ಶನವಾದನು ಶರಣನೆಂಬುದೀಗ– ಇಪ್ಪತ್ತೈದು ಧರೆಯೊಳಗೆ ಮುಪ್ಪುರ–ವಿಪ್ಪುದ ಕಂಡೆಯ್ಯ ಯೆಂಬ ಶಬ್ಧಕ್ಕರ್ಥ.

ತನುತ್ರಯಸಂಬಂಧವಾದ ಜೀವತ್ರಯಂಗಳ ಭ್ರಮಣೆಯಲ್ಲಿ ಸಪ್ತಧಾತುಗಳ ವರ್ತನೆಯೆಂಬ ಸಮುದ್ರಗಳಾವರಿಸಿ ವರ್ತಿಸಿ ಸಕಲ ಜೀವರು ತಮ್ಮ ಪ್ರಪಂಚಿನಿಂದೆ ಸುಜ್ಞಾನ ಶಿರಸ್ಸನೆಗಹಲೀಸವೆಂಬುದೀಗ ಮುಪ್ಪುರದೊಳಗೆ ಸಪ್ತೇಳು ಸಾಗರ ಸುತ್ತಿ ಹರಿದು ಸರ್ವರ ತಲೆಯ ನೆತ್ತ ಲೀಸವು ನೋಡಾಯೆಂಬ... ಸಪ್ತಧಾತುಗಳೊಡನೆ ಕೂಡಲ್ಪಟ್ಟ ಜೀವನ ಸಂಬಂಧವಾದ ಭವಸಾಗರವನು ಗುರುಕರುಣಮರ ಪಡೆದು ಲಿಂಗಾಂಗ ಸಂಬಂಧಿಯಾಗಿ ಷಟ್ಸ್ಥಲ ಜ್ಞಾನಕ್ರೀವಿಡಿದಾಚರಿಸಿ, ಪರಮ ಶಾಂತಿ ಜ್ಞಾನ–ಸ್ವರೂಪನಾದ ಶರಣನು ಮಂತ್ರಲಿಂಗ ಸಪ್ತಧಾತುಗಳ ವರ್ತನೆಯ ನಿವೃತ್ತಿ ಮಾಡಿದಲ್ಲಿ, ಆ ಸಪ್ತಧಾತುಗಳ ವರ್ತನೆ ನಷ್ಟವಾಗಿ, ಆ ಶರಣನು ಸದ್ರೂಪ ಬ್ರಹ್ಮವೇ ಆಗಲಾಗಿ, ಪಂಚವಿಂಶತಿ ತತ್ವ ಯುಕ್ತಿವಾದ ದೇಹಭಾವವು ನಿವೃತ್ತಿಯಾಗಿ, ತನು ತ್ರಯ ವರ್ತನೆ ನಿವೃತ್ತಿಯಾದುದನು ಸುಜ್ಞಾನೋದಯದ ಶರಣನು ಜ್ಞಾನದೃಕ್ಕಿನಿಂದ ನಿದರ್ಶನವಾದ ನೆಂಬುದೀಗ– ಸಪ್ತೇಳು ಸಾಗರವ ಒಂದು ಕಪ್ಪೆ ಕುಡಿದು ಸಾಗರವ(ಱ)ತು, ಕಪ್ಪೆ ಸತ್ತು, ಇಪ್ಪತ್ತೈದು ಧರೆಯಳಿದು ಮುಪ್ಪುರ ಬೆಂದುದ ಕಂಡೆನಯ್ಯ– ಯೆಂಬ ಶಬ್ಧಕರ್ಥ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಿ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮನವ ರವಿ ಮಾಡಿರುವೆ ತನುವ ಹದ ಮಾಡಿರುವೆ
ತನುಮನವ ಜಗಕೆ ನೀಡಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬುವಿ ಭಾನು ಜಲವಗ್ನಿ ಸುಳಿವ ಗಾಳಿಯನೆಲ್ಲ
ಮನುಕುಲಕೆ ಬಳಸಿರುವ ಕಡುಬಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೂರ್ತಿಪೂಜಕನಲ್ಲ ಜಾತಿಸೂತಕನಲ್ಲ
ಭ್ರಾಂತಿ ಭ್ರಮೆಯ ಗೆದ್ದ ನಿಜಸಿದ್ಧ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿದ ಹೊಟ್ಟೆಯಲಿರುವ ದೇವರ ಕಾಣುವ
ಮಾತುಮನ ಮೀರಿದ ದಯಾಘನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೇಸು ಬದುಕಿಗಾಗಿ ಏಸೊಂದು ನೋವುಂಡೆ
ಲೇಸಬದುಕಿಗಾಗಿ ನೀ ಸವೆದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೈಹಿಡಿದು ಕರೆತಂದು ಹಾಲನುಣಿಸಿದೆ ಕರುಣೆ
ಕೈಕಚ್ಚಿ ಎದುರಾದ ವಿಕಾರವ ಹರಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೋವೆ ಪ್ರಸಾದವೆಂದೆ ದೂರೆ ಪಾದೋದಕವೆಂದೆ
ಸ್ವಾನುಭಾವವೆ ಪ್ರಾಣಲಿಂಗವೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಹಮನೆಯ ಕಟ್ಟಿರುವ ಮಹಮಣಿಹ ನಡೆಸಿರುವ
ಮಹಕೆ ಮಹದಾದುದನು ತೋರಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೋಪತಾಪವನೆಲ್ಲ ದಾಸೋಹಗೊಳಿಸುತ
ದಾಸೋಹಯೋಗವ ನಡೆಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾವಿಯನುಟ್ಟಿರುವ ಕಾವಿಯ ತೊಟ್ಟಿರುವ
ಕಾವಿಯನುಟ್ಟಂತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನ ಮಹವರಿತು ಮಾತಿನ ನೆಲೆಯರಿತು
ಮಾತುಮಂತ್ರವ ಮಾಡಿ ನುಡಿದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಹೊನ್ನಶೂಲ

*ಭಗವಾನ್ ಬಸವಣ್ಣನವರು 'ಹೊಗಳಿ ಹೊಗಳಿ ಹೊನ್ನಶೂಲದಲಿಕ್ಕಿದರಯ್ಯಾ' ಎನ್ನುತ್ತಾರೆ. ಇದು ಅವರ ಮನದಾಳದ ನೋವು. ಹೊಗಳಿಕೆ ವ್ಯಕ್ತಿಯ ವಿಕಾಸಕ್ಕೆ ಬಹು ದೊಡ್ಡ ಶತ್ರು. ಇದನ್ನರಿತ ಅಣ್ಣನವರು ಕೂಡಲಸಂಗಮನನ್ನು ಪ್ರಾರ್ಥಿಸುತ್ತಾರೆ. ಎನ್ನನ್ನು ಯಾರೂ ಹೊಗಳದಂತೆ ಮಾಡು ಎಂಬುದಾಗಿ. ಅಣ್ಣನವರ ತತ್ವಾಭಿಮಾನಿಗಳಾದ ನಮಗೂ ಅವರ ಪ್ರಾರ್ಥನೆ ಸರಿಯೆನಿಸುತ್ತದೆ. ಇತ್ತೀಚಿನ ದಿನಗಳಲ್ಲಿ ನಮಗೆ ನೂರು ವರ್ಷವಾಗುತ್ತಿದೆ ಎಂಬ ಕಾರಣದಿಂದಾಗಿ, ಮಾಡಿರುವ ಕಿಂಚಿತ್ ಸೇವೆಯನ್ನು ಬಹು ದೊಡ್ಡದಾಗಿ ಭಾವಿಸಿ 'ಗುರುವಂದನ' ಸಮಾರಂಭಗಳನ್ನು ಏರ್ಪಡಿಸಿಕೊಂಡು ಸದ್ಭಾವಿಗಳು, ಆತ್ಮೀಯರು, ಪ್ರೀತಿ ವಿಶ್ವಾಸಗಳಿಂದ ಗೌರವಿಸುತ್ತಿದ್ದಾರೆ. ಅದು ಅವರುಗಳ ಸಂಸ್ಕೃತಿ ಎಂದೇ ಭಾವಿಸುತ್ತೇವೆ. ಆದರೆ ಸಮಾರಂಭಗಳಲ್ಲಿ ಗಣ್ಯರು, ರಾಜಕಾರಣಿಗಳು, ಮಠಾಧಿಪತಿಗಳು ನಮ್ಮನ್ನು ವಿಶೇಷವಾಗಿ ಹೊಗಳುವುದನ್ನು ಕೇಳಿದಾಗ ನಮಗೆ ಸಂಕೋಚವಾಗುತ್ತದೆ. ಬುದ್ಧನಿಗೆ, ಬಸವಣ್ಣನವರಿಗೆ, ಅಲ್ಲಮಪ್ರಭುಗಳಿಗೆ, ಸಿದ್ಧಲಿಂಗೇಶ್ವರರಿಗೆ ಹೋಲಿಸಿ ನಮ್ಮನ್ನು ಹೊಗಳುವುದನ್ನು ಕಂಡಾಗ ನಮಗಾಗುವ ನೋವನ್ನು ಯಾರಲ್ಲಿ ಹೇಳಿಕೊಳ್ಳುವುದು? ಏನೆಂದು ಹೇಳಿಕೊಳ್ಳುವುದು? ಎನಿಸುತ್ತದೆ. ಆ ಪೂಜ್ಯರೆಲ್ಲ ನಡೆದ ದಾರಿ ನಮ್ಮದಾಗಿದೆಯೇ ಎಂದುಕೊಳ್ಳುತ್ತೇವೆ. ಲೋಕಸಂಗ್ರಹ ನಮ್ಮಿಂದ ಅಷ್ಟಿಷ್ಟು ನಡೆದಿರಬಹುದು. ಬುದ್ಧ, ಬಸವಣ್ಣ, ಅಲ್ಲಮರಂತೆ 'ಎನ್ನೊಳಗಿನದನಿಗೆ' ಉತ್ತರ ಕೊಡುವುದಾಗಿದೆಯೇ ಎನಿಸುತ್ತದೆ. ಹೊಗಳಿಕೆ ಕೇಳುವುದಕ್ಕೆ ಪ್ರಿಯವಾಗಿರುತ್ತದೆ. ಆದರೆ ಅದರಂತಹ ವಿಷ ಮತ್ತೊಂದಿಲ್ಲ. ವಿಷ ಕೇವಲ ಪ್ರಾಣವನ್ನು ತೆಗೆಯುತ್ತದೆ. ಹೊಗಳಿಕೆ ವ್ಯಕ್ತಿತ್ವವನ್ನೇ ಕೊಲ್ಲುತ್ತದೆ. 'ನಡೆದಾಡುವ ದೇವರು' ಎಂಬ ಚೆನ್ನದ ಮಾತಿನ ಚೂರಿಯಿಂದ ನಮ್ಮನ್ನು ಚುಚ್ಚುತ್ತಾರೆ. ಜನ ಚಪ್ಪಾಳೆ ತಟ್ಟುತ್ತಾರೆ. ನಮಗೆ ಹಾಗೆಂದು ಕರೆದಾಗ ಹೊಗಳಿಕೆಗೆ ಇತಿಮಿತಿ ಬೇಡವೆ ಎನಿಸುತ್ತದೆ. ನಾವು ನಮ್ಮ ಗುರುಗಳು ತೋರಿದ ದಾರಿಯಲ್ಲಿ ಹೆಜ್ಜೆ ಹಾಕಿದ್ದೇವೆ. ಅಷ್ಟೆ. ಹೆಚ್ಚೇನೂ ಮಾಡಿದ್ದೇವೆ ಎಂಬ ಭಾವನೆ ನಮಗಿಲ್ಲ. ಹಾಗೆಂದುಕೊಳ್ಳುವ, ಮಾಡಿದ್ದೇವೆ ಎಂಬ ಭಾವವೂ ನಮಗೆ ಬರದಿರುವಂತೆ ಕರುಣಿಸಯ್ಯಾ ಎಂದು ನಮ್ಮಿಷ್ಟಲಿಂಗದಲ್ಲಿ ಪ್ರತಿನಿತ್ಯ ಮೊರೆಯಿಡುತ್ತೇವೆ. 'ಯಾರೇನಂದರೂ ಓರಂತಿಪ್ಪುದೇ ಸಮತೆ' ಎಂಬ ಸಿದ್ಧರಾಮ ಶಿವಯೋಗಿಗಳನ್ನು ನೆನೆದು ಸುಮ್ಮನಿರುತ್ತೇವೆ.*

*

# ರಾಷ್ಟ್ರಕವಿ ಜಿ.ಎಸ್.ಎಸ್.

'ಓ ಮೈ ಗಾಡ್' ಎಂಟು ಸಾವಿರ ಮಕ್ಕಳಿವೆಯೆ? ಅದ್ಭುತ ಸ್ವಾಮೀಜಿಯವರ ಶಕ್ತಿ ನೆನೆಸಿಕೊಂಡರೆ ಪರಮಾಶ್ಚರ್ಯವಾಗುತ್ತದೆ. ಅನೂಹ್ಯ ವ್ಯಕ್ತಿತ್ವ ಶ್ರೀಗಳವರದು' ಎಂದು ಡಾ॥ ಜಿ.ಎಸ್. ಶಿವರುದ್ರಪ್ಪನವರು ಕಾರ್ಯಕ್ರಮ ಒಂದಕ್ಕೆ ಶ್ರೀಮಠಕ್ಕೆ ಅವರನ್ನು ಆಮಂತ್ರಿಸಲು ಹೋದಾಗ ಆಮಂತ್ರಣರೊಂದಿಗೆ ವ್ಯಕ್ತಪಡಿಸಿದ ಮೆಚ್ಚುಗೆಯ ಮಾತುಗಳು. ಡಾ॥ ಜಿ.ಎಸ್. ಎಸ್. ರವರು ಶ್ರೀಮಠದ ಹಳೆಯ ವಿದ್ಯಾರ್ಥಿ. ಮೂರು ವರ್ಷ ಶ್ರೀಮಠದ ಪ್ರಸಾದವನ್ನು ಸವಿದ ಭಾಗ್ಯ ಅವರದು. ಅವರಿಗೀಗ ರಾಷ್ಟ್ರಕವಿ ಘನಸಿರಿ ಪ್ರಾಪ್ತವಾಗಿದೆ. ನಮ್ಮ ಕಾಲದ ಮಹತ್ವದ ಸಾಂಸ್ಕೃತಿಕ ವ್ಯಕ್ತಿಯಾಗಿ ಕನ್ನಡ ಪರಂಪರೆಯ ಪ್ರತಿನಿಧಿಯಾಗಿ ಹೊರಹೊಮ್ಮಿದ್ದಾರೆ. ಸಮಚಿತ್ತದ ಮಗು ಮುಗ್ಧತೆಯು ಜಿಎಸ್ಎಸ್.ರವರದು. ಸದ್ದುಗದ್ದಲವಿರದ ಸಾಧನೆ. ಯಾವ ಪ್ರಭಾವ ಪ್ರವಾಹಕ್ಕೂ ತಮ್ಮನ್ನು ಒಪ್ಪಿಸಿಕೊಳ್ಳದ ಹಿರಿಯ ಸಾಂಸ್ಕೃತಿಕ ಚೇತನ ಅವರು. ತನ್ನಂತರಂಗದ ಹಣತೆ ಆರದಂತೆ ಸದಾ ಎಚ್ಚರ ವಹಿಸಿದವರು. ಎಂತಹ ಸಂದರ್ಭದಲ್ಲೂ ಸಂಯಮ ಕಳೆದುಕೊಳ್ಳದ ಲಘುವಾಗದ ಗಾಂಭೀರ್ಯ ಘನತೆ ಅವರದು. 'ಜಗತ್ತಿನ ಎಲ್ಲವನ್ನು ಕನ್ನಡದ ಮೂಲಕವೇ ಒಳಗೊಳ್ಳಬೇಕೆನ್ನುವ ನಮ್ಮ ಪರಂಪರೆಯಲ್ಲಿ ಬೇರು ಬಿಟ್ಟ ಅದರ ಸ್ವಾತಂತ್ರ್ಯದ ಮೂಲಕವೇ ಮಹತ್ವದ್ದನ್ನು ಸಾಧಿಸಬೇಕೆನ್ನುವ ಖಚಿತ ನಂಬಿಕೆ ಅವರದು.

ಎದೆ ತುಂಬಿ ಹಾಡಿದ ಕವಿಗೆ ರಾಷ್ಟ್ರಕವಿ ಪ್ರಶಸ್ತಿ ಸಂದಾಯವಾದದ್ದು ನಿಜಕ್ಕೂ ಅಭಿನಂದನೀಯ. ಜೀವನುದ್ದಕ್ಕೂ ಪ್ರೀತಿಯ ಹಣತೆಯನ್ನು ಹಚ್ಚುತ್ತ ಬಂದ ಜಿಎಸ್ಎಸ್ ಅವರದು ವಿಶಿಷ್ಟವಾದ ವ್ಯಕ್ತಿತ್ವ. ಅವರು ೧೯೨೬ರ ಫೆಬ್ರವರಿ ೭ರಂದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ಜನಿಸಿದರು. ೧೯೪೯ರಿಂದ ಮೈಸೂರು ವಿವಿಯಲ್ಲಿ ಕನ್ನಡ ಅಧ್ಯಾಪಕ ವೃತ್ತಿಯನ್ನು ಪ್ರಾರಂಭಿಸಿ ೧೯೬೩ರಿಂದ ೧೯೬೬ರವರೆಗೆ ಹೈದರಾಬಾದ್ ಉಸ್ಮಾನಿಯಾ ವಿವಿಯಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು. ೧೯೭೦ರಿಂದ ಬೆಂಗಳೂರು ವಿವಿದಲ್ಲಿ ೧೯೮೬ರವರೆಗೆ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ಮತ್ತು ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ೧೯೮೭ರಲ್ಲಿ ಸೇವೆ. ೧೯೮೭ ರಲ್ಲಿಯೇ ದಾವಣಗೆರೆಯಲ್ಲಿ ನಡೆದ ೬೧ನೇ ಅ.ಭಾ.ಕ.ಸಾ. ಸಮ್ಮೇಳನದ ಅಧ್ಯಕ್ಷರಾಗಿ ಗೌರವಿಸಲ್ಪಟ್ಟರು. ಡಾ॥ ಜಿ.ಎಸ್.ಎಸ್. ರವರಿಹೆ ೧೯೭೪ರಲ್ಲಿ ಮಾಸ್ಕೋದಲ್ಲಿ ೨೨ ದಿನ' ಎಂಬ ಕೃತಿಗೆ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ, ೧೯೮೨ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ೧೯೮೪ರಲ್ಲಿ ಕಾವ್ಯಾರ್ಥ ಚಿಂತನ ಕೃತಿಗೆ., ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ, ೧೯೯೮ರಲ್ಲಿ ಪಂಪ ಪ್ರಶಸ್ತಿ ಸಂದಿವೆ.

ಡಾ॥ ಜಿ.ಎಸ್.ಎಸ್. ಕವಿಕುವೆಂಪು ಅವರ ಪ್ರಿಯ ಶಿಷ್ಯರು. ಕುವೆಂಪುವಿನಂತೆ ಅವರದು ವಿಸ್ತೃತವಾದ ಪ್ರತಿಭೆ. ವೈಯಕ್ತಿಕವಾಗಿ ಹಲವು ಹನ್ನೊಂದು ಸಂದರ್ಭಗಳಲ್ಲಿ ನೋವನ್ನನುಭವಿಸದರೂ ಅವೆಲ್ಲವುಗಳನ್ನು ಸುಸಂಸ್ಕೃತವಾಗಿ ಅರಗಿಸಿಕೊಂಡವರು. ಅವರ ದೈಹಿಕ ನಿಲುವು ಆತ್ಮೀಯವಾದದ್ದು. ಅವರು ದೇವರನ್ನು ಹುಡುಕಿದ್ದು ಕಲ್ಲು ಮಣ್ಣುಗಳ ಗುಡಿಗಳಲ್ಲಿ ಅಲ್ಲ. ನಮ್ಮಲ್ಲೇ ಇರುವ ಪ್ರೀತಿ ಸ್ನೇಹಗಳ ಆಪ್ತ ವಲಯಗಳಲ್ಲಿ. 'ಎಲ್ಲಿದೆ ನಂದನ, ಎಲ್ಲಿದೆ ಭುವನ ಎಲ್ಲಾ ಇವೆ ಈ ನಮ್ಮೊಳಗೆ' ಎಂಬ ಕವಿಯ ತಿಳಿವು ಅದ್ಭುತವಾದುದು. ಜೀವನದಲ್ಲಿ ಹೊಂದಾಣಿಕೆಯಿಲ್ಲವೆಂಬುದನ್ನು ಸಾಧಿಸುವುದೇ ದೊಡ್ಡ ಸಾಧನೆ ಎನ್ನುವರನ್ನು 'ಹತ್ತಿರವಿದ್ದೂ ದೂರ ನಿಲ್ಲುವೆವು ನಮ್ಮ ಅಹಂಮ್ಮಿನ ಕೋಟೆಯಲ್ಲಿ ಎಷ್ಟು ಕಷ್ಟವೋ ಹೊಂದಿಕೆ ಎಂಬುವುದು ನಾಲ್ಕು ದಿನದ ಬದುಕಿನಲ್ಲಿ' ಎನ್ನುತ್ತಾರೆ.

ಶ್ರೀ ಶಿವರುದ್ರಪ್ಪನವರು ಪ್ರಾಧ್ಯಾಕರಾಗಿ ರೂಪಿಸಿದ ಶಿಷ್ಯರು ಸಾವಿರಾರು. ಅವರೆಲ್ಲಾ ಅವರ ಪ್ರೀತಿಯ ಸವಿಯನ್ನು ಅನುಭವಿಸಿದವರು. ಅವರನ್ನು ತಮ್ಮ ಜೀವನದ ಆದರ್ಶವೆಂದು ನಂಬಿ ನಡೆದಿದ್ದಾರೆ. ಜಿ.ಎಸ್.ಎಸ್. ರವರ ಆತ್ಮೀಯತೆಯನ್ನು ಆಪ್ತತತೆಯನ್ನು ನೇರವಾಗಿ ಹೃದಯಕ್ಕೆ ಮುಟ್ಟಿಸಿವಂಥದು. ಕನ್ನಡ ಕಾವ್ಯ ಪರಂಪರೆಯ ಕಾಲ ಘಟ್ಟಗಳಲ್ಲಿ ಮೂಡಿ ಬಂದ ನವೋದಯ, ನವ್ಯ, ದಲಿತ, ಬಂಡಾಯ ಎಲ್ಲ ಪಂಥಗಳ ಸತ್ವವನ್ನು ತಮ್ಮದಾಗಿಸಿಕೊಂಡು ತಮ್ಮದೇ ಆದ ವಿಶಿಷ್ಟತೆಯನ್ನು ಮೆರೆದವರು. ತಮ್ಮ ಶಿಷ್ಯರಿಗೆ 'ಕಣಿವೆ ತಳದೊಳು ಕೊಳವ ಜೊಂಡಾಗದಿರು ಮಗುವೇ ಬೆಟ್ಟ ಗುಡ್ಡವ ಹೇರಿ ಬೆಳವ ತೇಗವಾಗು' ಎಂದು ಹರಸುತ್ತಲೇ 'ಕಣ್ಣೆತ್ತಿಯೂ ನೋಡದಿರು ದೊಡ್ಡವರ ಸಣ್ಣತನದತ್ತ ಬಿಟ್ಟಬಿಡು ಅವರನ್ನು ಅತ್ತ ಕಡೆಗೆ ಕೆಟ್ಟ





ಇಟ್ಟಿಗೆಯಿಂದ ಕಟ್ಟದಿರು ನಿನ್ನ ಮನೆ ನಾಳಿನಾಶೆಯ ಶಿಖರ ನೀನು ನಮಗೆ' ಎಂದು ಸೂಚ್ಯವಾಗಿ ಹಿತ ನುಡಿದವರು.

ಕವಿ ಕುವೆಂಪು ರವರ 'ನೀನೇರಬಲ್ಲೆಯಾ ನಾನೇರುವೆತ್ತರಕ್ಕೆ' ಎಂಬ ಬೇರೊಂದು ಸಂದರ್ಭದ ಮಾತಿನಂತೆ ವಿನಮ್ರವಾಗಿ ಅಬ್ಬರ ಆಡಂಬರವಿಲ್ಲದೆ ತನ್ನ ಗುರು ಏರಿದ 'ರಾಷ್ಟ್ರಕವಿ ಎತ್ತರಕ್ಕೆ ಏರಿರುವ ಜಿಎಸ್ಎಸ್ ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳಲ್ಲಿ ಒಬ್ಬರೆಂಬುದು ಬಹು ಹೆಮ್ಮೆಯ ವಿಷಯವಾಗಿದೆ. ಶ್ರೀ ಸಿದ್ಧಗಂಗಾ ಶ್ರೀಗಳವರನ್ನು ಕುರಿತು ಜಿಎಸ್ಎಸ್ ರವರು ರಚಿಸಿದ ಸಿದ್ಧಗಂಗೆಯ ಶ್ರೀ ಚರಣಕ್ಕೆ ಎಂಬ ಕವನದ ಸಾಲುಗಳನ್ನು ಇಲ್ಲಿ ಉಲ್ಲೇಖಿಸಲು 'ಸಿದ್ಧಗಂಗಾ' ಸಂತೋಷಿಸುತ್ತದೆ.

ಹರನ ಕರುಣೋದಯದ ತೆರದಲಿ ಬೆಳಗು ತೆರೆಯುವ ಹೊತ್ತಿಗೆ ।
ವೇದ ಘೋಷವ ದಿವ್ಯ ಲಹರಿಯು ಮನವ ತೊಳೆಯಲು ಮೆಲ್ಲಗೆ ।
ಬರುವ ಶ್ರೀ ಗುರು ಪಾದುಕೆಯ ದನಿ ಅನುರಣಿತವಾಗಲು ಮೌನಕೆ ।
ಸಿದ್ಧಗಂಗೆಯ ನೆಲವು ಜಲವು ನಮಿಸಿ ನಿಲುವುದು ಸುಮ್ಮಗೆ ॥ ॥೧॥

ಬೆಟ್ಟಬಂಡೆಯ ನಡುವೆ ಗಿಡ ಮರ ಹೂವನೆತ್ತಿರೆ ಪೂಜೆಗೆ ।
ದೇಗುಲದ ಪೂಜಾರತಿಯ ಗಂಟೆಯ ಮೊಳಗು ಮುಟ್ಟಲು ಬಾನಿಗೆ ।
ಧೂಪಗಂಧವು ಮಂದಮಂದಾನಿಲನ ಜೊತೆಯೊಳು ಮನಸಿಗೆ ।
ಸಂಭ್ರಮನುಕ್ಕಿಸೆ ಬೆಳಗು ಇಳಿವುದು ಸಿದ್ಧಗಂಗೆಯ ಕ್ಷೇತ್ರಕೆ ॥ ॥೨॥

ಇಲ್ಲಿ ಇಲ್ಲ ಪವಾಡದದ್ಭುತ ಅಥವ ಉತ್ಸವದಬ್ಬರ ॥
ಮುಡಿಯೆನೆತ್ತಿದೆ ಸರಳ ಸಾಧಾರಣ ಬದುಕಿನ ಗೋಪುರ ।
ಅದರ ಮೇಲಿದೆ ತ್ಯಾಗ ಧ್ವಜ ಕೈಬೀಸಿ ಕರೆವುದು ಪಥಿಕರ ।
ಪರಮ ನಿರಪೇಕ್ಷೆಯಲಿ ದಿನವೂ ಸೇವೆಗಾಗಿದೆ ಸರ್ವರ ॥ ॥೩॥

ಭಿಕ್ಷೆ ಹೊರಟಿದೆ ಜಂಗಮದ ಜೋಳಿಗೆ ಲಕ್ಷ ಜನಗಳ ಪೊರೆದಿದೆ ।
ತೀರ್ಥವಾಗಿದೆ ಭಕ್ತರಿಗೆ ಜೊತೆಗೇ ಸ್ಫೂರ್ತಿಯಾಗಿದೆ ಬುದ್ಧಿಗೆ ।
ಬಂದ ಹಣತೆಗೆ ಎಣ್ಣೆ – ಬತ್ತಿಯ ದೀಪ್ತಿ ದಾನವ ಮಾಡಿದೆ ।
ರಕ್ಷೆಯಾಗಿದೆ ಮುಗಿಲನೇರಿದ ಎಷ್ಟೋ ರೆಕ್ಕೆಯ ಹಾದಿಗೆ ॥ ॥೪॥

ಸದ್ದುಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ ।
ಕಾಯಕವೇ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ ।
ಕಾವಿಯುಡುಗೆಯನುಟ್ಟು ನಭವೇ ಕಿರಣ ಹಸ್ತವ ಚಾಚಿದೆ ।
ಎಲ್ಲವರೆನುವ ಭಾವದ ಕರುಣೆಯೇ ಕಣ್ತೆರೆದಿದೆ ॥ ॥೫॥

ರಾಷ್ಟ್ರಕವಿಯಾದ ಸಂದರ್ಭದಲ್ಲೂ ಜಿಎಸ್ಎಸ್ರವರು ಶ್ರೀಗಳವರ ಸನ್ನಿಧಿಗೆ ಸಕುಂಟುಭಿಗಳಾಗಿ ಆಗಮಿಸಿ ಆಶೀರ್ವಾದ ಪಡೆದುದನ್ನು 'ಸಿದ್ಧಗಂಗಾ' ಇಲ್ಲಿ ಸ್ಮರಿಸುತ್ತದೆ.

ಜಿಎಸ್ಎಸ್ ರವರ ಸೌಂದರ್ಯ ಸಮೀಕ್ಷೆ, ಕರ್ಮಯೋಗಿ, ಸಾಮಗಾನ, ದೇವಶಿಲ್ಪಿ, ದೀಪದ ಹೆಜ್ಜೆ, ಪರಿಶೀಲನಾ, ಗತಿಬಿಂಬ, ಕಾರ್ತಿಕ, ಅನಾವರಣ, ಗೋಡೆ, ಕಾವ್ಯಾರ್ಥ ಚಿಂತನ ಇವು ಕೆಲವು ಪ್ರಮುಖ ಕೃತಿಗಳು.

– ಸಂಪಾದಕ

# ಕರ್ನಾಟಕೋದಯದ ಕತೆ-ವ್ಯಥೆ

**- ಸೂರ್ಯನಾಥ ಕಾಮತ**

**೦೧-೧೧-೨೦೦೬** ಇಂದು ಕರ್ನಾಟಕ ರಾಜ್ಯವಾಗಿ ಐವತ್ತು ವರ್ಷಗಳಾದುವು. ಈ ಕರ್ನಾಟಕ ಒಂದು ಏಕೀಕೃತ ರಾಜ್ಯವಾಗಲು ಐವತ್ತು ವರ್ಷಗಳ ಹೋರಾಟ ನಡೆಸಬೇಕಾಯಿತು. ಏಕೀಕರಣದ ನಂತರವೂ ಕರ್ನಾಟಕ ಎಂಬ ಹೆಸರು ಪಡೆಯಲು ಮತ್ತು ೧೭ ವರ್ಷ ಗುದ್ದಾಟಗಳಾದವು. ಏಕೀಕರಣ ಚಳುವಳಿ ಮತ್ತು ಸ್ವಾತಂತ್ರ್ಯ ಚಳುವಳಿಗಳು ಜೊತೆ ಜೊತೆಯಾಗಿ ಸಾಗಿದ್ದವು. ಸ್ವಾಂತಂತ್ರ್ಯ ಚಳುವಳಿಯ ನೋವಿನ ಜೊತೆಗೂ ಏಕೀಕರಣದ ನೋವೂ ಸೇರಿ ಹೋಯಿತು. ಇದು ಅವಳಿ ಮಕ್ಕಳ ಪ್ರಸವವೇದನೆಯಂತೆ ಆದರೆ 'ಸ್ವಾತಂತ್ರ್ಯ'ವೆಂಬ ಮಗು ಹುಟ್ಟಿದ ಮೇಲೆ ಏಕೀಕರಣವೆಂಬ ಅವಳಿ ಮಗು ಹುಟ್ಟಲು ಹೆಚ್ಚುಕಾಲ ಹಿಡಿಯಲಾರದೆಂದು ನಂಬಿದ್ದವರಿಗೆ ನಿರಾಶೆ-ನೋವು ಕಡೆಗೂ ಏಕೀಕರಣವಾಯಿತು.

ಇಂದಿನ ಪೀಳಿಗೆಯವರಿಗೆ ಸ್ವಾತಂತ್ರ್ಯವೆಂದರೇನೆಂದು ತಿಳಿಯಲು ಕಷ್ಟವಾಗುತ್ತದೆ. ಸ್ವಾತಂತ್ರ್ಯ ಚಳುವಳಿಯಿಂದಾಗಿ ಪ್ರತಿಯೊಬ್ಬ ಭಾರತದ ಸ್ತ್ರೀ-ಪುರುಷರು ಇದರಲ್ಲಿ ಪಾಲುಗೊಂಡರೆಂದು ಭಾವನೆ ಬರುತ್ತದೆ. ಆದರೆ ಯಾವ ಕಾಲಕ್ಕೂ ಈ ದೇಶದಲ್ಲಿ ಒಟ್ಟು ಆಂಗ್ಲರು ಒಂದೆರಡು ಲಕ್ಷಕ್ಕೂ ಮೀರಿರಲಿಲ್ಲ. ಸ್ವಾಂತ್ರ್ಯ ಚಳುವಳಿಯಲ್ಲಿ ಕ್ರಿಯಾಶೀಲ ವಾಗಿ ಪಾಲುಗೊಂಡ ಭಾರತೀಯರು ಶೇಕಡಾ ಒಂದರಷ್ಟೂ ಇರಲಿಲ್ಲ. ಬ್ರಿಟೀಷರ ನೌಕರರ್ರಾಗಿ, ಅವರ ಕೈಕೆಳಗಿನ ಆಜ್ಞಾ ಧಾರಕರಾಗಿ, ಅವರ ಸೈನಿಕರಾಗಿ ಲಕ್ಷ ಲಕ್ಷ ಭಾರತೀಯರೇ ಇದ್ದರು. ನಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸತ್ಯಾಗ್ರಹಿಗಳ ಮೇಲೆ ಲಾಠಿ ಪ್ರಹಾರ. ಗುಂಡು ಹಾರಿಸುವಿಕೆ, ಜೈಲಿನಲ್ಲಿ ಅವರಿಗೆ ಚಿತ್ರಹಿಂಸೆ ಕೊಡುವಿಕೆ, ಇದೆಲ್ಲವನ್ನೂ ಮಾಡಿದವರು ಭಾರತೀಯರೇ ಎಂದು ಅನೇಕರಿಗೆ ತಿಳಿದಿಲ್ಲ. ದೇಶಭಕ್ತರಿಗೆ ಗಲ್ಲು ಶಿಕ್ಷೆ ವಿಧಿಸಿದ ನ್ಯಾಯಾಧೀಶರೂ ಗಲ್ಲಿಗೇರಿಸಿದವರೂ ಭಾರತೀಯರೆ. ಜೊತೆಗೆ ಏಕೀಕರಣದ ಪೂರ್ವದ ಸ್ಥಿತಿ ಏನು? ಉಡುಪಿಯ ಒಂದು ಮಠದ ಮೂಲ ದಾಖಲೆ ಹುಡುಕಲು ಈಗ ಚೆನ್ನೈಗೆ ಏಕೆ ಹೋಗಬೇಕು? ಹುಬ್ಬಳ್ಳಿಯ ಒಂದು ಸಾರ್ವಜನಿಕ ತಕರಾರಿನ ಮಾಹಿತಿ ಪಡೆಯಲು ಮುಂಬೈಗೇಕೆ ಧಾವಂತ ಮಾಡಬೇಕು? ಕೊಪ್ಪಳದ ಒಂದು ವ್ಯಾಜ್ಯದ ಮೂಲ ಮಾಹಿತಿ ಪಡೆಯಲು ಹೈದ್ರಾಬಾದಿಗೆ ಏಕೆ ಪ್ರಯಾಣ ಮಾಡಬೇಕು? ಕುಂದಗೋಳದ ಒಂದು ಸಮಸ್ಯೆಯ ಹಿನ್ನಲೆ ತಿಳಿಯಲು ವಿಜಾಪುರದ ಜಿಲ್ಲಾಧಿಕಾರಿ ಕಚೇರಿಯ ಮುಖ ಏಕೆ ನೋಡಬೇಕು? ಇದೆಲ್ಲ ಅನೇಕರಿಗೆ ಸೋಜಿಗವೆನಿಸುತ್ತದೆ.

ಇದಕ್ಕೆಲ್ಲ ಕಾರಣ ಕರ್ನಾಟಕ ಆಗ ಒಡೆದ ಕನ್ನಡಿಯಂತೆ ಇಪ್ಪತ್ತು ಆಡಳಿತಗಳಲ್ಲಿ ಸೇರಿ ಹೋದದ್ದು ಹಾಗಾದರೆ 'ಕರ್ನಾಟಕ' ಎಂಬ ಹೆಸರು ಎಲ್ಲಿತ್ತು? ಕನ್ನಡ ಮಾತನಾಡುವವರ ನೆಲ ವಿವಿಧ ಆಡಳಿತಗಳಲ್ಲಿ ಚದುರಿ ಹೋಗಿದ್ದರೂ, ಜನರ ಹೃದಯದಲ್ಲಿ ಇತ್ತು. ಹೃದಯ ಸಿಂಹಾಸನದಲ್ಲಿ ಇದ್ದ ಕರ್ನಾಟಕವನ್ನು ರಾಜಸಿಂಹಾಸನದಲ್ಲಿ ವಿರಾಜಮಾನವಾಗಿ ಮಾಡಲು ನಡೆಸಿದ ಚಳುವಳಿಯೇ ಏಕೀಕರಣ ಚಳುವಳಿ. ಆಲೂರು ವೆಂಕಟ ರಾಯರಂಥ ನಾಯಕರ ಜೊತೆ ಮುಂದಿನ ಪೀಳಿಗೆಯ ಕನಿಷ್ಠ 2-3 ಪೀಳಿಗೆಯ ಜನ ಸೇರಿಕೊಂಡು ಈ ಹೋರಾಟ ಮುಂದುವರಿಸಿದರು.

ಬಾದಾಮಿ ಚಾಲುಕ್ಯರ ಕಾಲದಲ್ಲೇ ಅಖಂಡವಾಗಿದ್ದು, 'ಕಾವೇರಿಯಿಂದಲೂ ಗೋದಾವರಿವರೆಗೆ ನಾಡು ಮುಂದೆ ಕಾಲಕಾಲಕ್ಕೆ ಒಡೆದ ಕತೆ ದೀರ್ಘವಾದುದು. ಸುಮಾರು ೧೩೦೦ ವರ್ಷಗಳದು. ಒಡೆದ ಕನ್ನಡಿ ಒಗ್ಗೂಡಿ, ಒಗ್ಗೂಡಿದ ನಾಡು ಮತ್ತೆ ಒಡೆದ ದುರಂತಗಳ ಕತೆ ಇಲ್ಲಿ ಹೇಳಿ ಮುಗಿಯದು. ಹರಿದು ಹೋದ ದೇಹವನ್ನು ಒಗ್ಗೂಡಿಸಿ, ಏಕೀಕರಿಸಿ, ಅದಕ್ಕೆ ಮತ್ತೆ ಜೀವ ತುಂಬಿದ್ದು ಕನ್ನಡಿಗರ ದೀರ್ಘಕಾಲದ ತಪಸ್ಸಿನ ಶಕ್ತಿ. ಆ ತಪಸ್ಸೇ ಏಕೀಕರಣ ಚಳುವಳಿ. ಅದೊಂದು ಸಾಮೂಹಿಕ ತಪಸ್ಸು.

ಒಡೆದ ದೇಹದ ಚೂರುಗಳೆಷ್ಟು? ಇಪ್ಪತ್ತು ಸತ್ತೆಗಳು ಅಲ್ಲದೆ ಹಲವು ದ್ವೀಪಗಳು. ಬ್ರಿಟೀಷರ ಆಡಳಿತಕ್ಕೆ ಸೇರಿದ ಮುಂಬೈ ರಾಜ್ಯದ ಬಿಜಾಪುರ ಧಾರವಾಡ, ಬೆಳಗಾವಿ, ಉತ್ತರ ಕನ್ನಡ ಜಿಲ್ಲೆಗಳು, (೨) ಬ್ರಿಟೀಷರದೇ ಮದ್ರಾಸ್ ರಾಜ್ಯದ ದಕ್ಷಿಣ ಕನ್ನಡ, ಬಳ್ಳಾರಿ ಜಿಲ್ಲೆಗಳು ಮತ್ತು ಕೊಳ್ಳೆಗಾಲ (೩) ಬ್ರಿಟೀಷರೇ ನಿರ್ವಹಿಸುತ್ತಿದ್ದ ಕೊಡಗು. (೪) ಹೈದರಾಬಾದ ನಿಜಾಮರಿಗೆ ಸೇರಿದ್ದ ಗುಲ್ಬರ್ಗ ರಾಯಚೂರು, ಬೀದರ ಜಿಲ್ಲೆಗಳು (೫) ಬ್ರಿಟೀಶರ ಆಡಳಿತಕ್ಕೆ ಒಳಪಟ್ಟ ಬೆಂಗಳೂರು ಮತ್ತು ಬೆಳಗಾವಿಯ ಕಂಟೋನ್ಮೆಂಟ್ (ಕ್ಯಾಂಪ್). ಇಡಿಯಾದ (೬) ಮುಧೋಳ(೭) ರಾಮದುರ್ಗ (೮) ಸವಣೂರು (೯) ಸೊಂಡೂರು ಸಂಸ್ಥಾನಗಳು (೧೦) ಜಮಖಂಡಿ ಅದಕ್ಕೆ ಸೇರಿದ ಕುಂದಗೋಳ ಪರಿಸರ(೧೧) ಕೊಲ್ಲಾಪುರಕ್ಕೆ ಸೇರಿದ ರಾಯಭಾಗ, ಕಟಿಕೋಳ, ತೊರಗಲ್ ಪರಿಸರಗಳು. ಈಗಿನ ಚಿಕ್ಕೋಡಿ ತಾ॥ ಕೆಲ ಗ್ರಾಮಗಳು (೧೨) ಸಾಂಗಲಿ ಸಂಸ್ಥಾನಕ್ಕೆ ಸೇರಿದ ಷಾಪುರ ಗುಂಪು, ದೊಡ್ಡವಾಡ, ಶಿರಹಟ್ಟಿ ಗುಂಪು(೧೩) ಮೀರಜ್ ಸಂಸ್ಥಾನಕ್ಕೆ ಸೇರಿದ್ದ ಲಕ್ಷ್ಮೇಶ್ವರ ಪರಿಸರ(೧೪) ಜೂನಿಯರ್ ಮೀರಜ್(ಬುಧಗಾಂವ್)ಗೆ ಸೇರಿದ್ದ ಗುಡಿಗೇರಿ ಪರಿಸರ ೧೫) ಔಂಧ್ ಸಂಸ್ಥಾನಕ್ಕೆ ಸೇರಿದ್ದ ಗುಣದಾಳು ಗ್ರಾಮಗಳ ಗುಂಪು(ಬಿಜಾಪುರ ಒಳ) (೧೬) ಕುರಂದವಾಡಕ್ಕೆ ಸೇರಿದ್ದ





ಬಿಜಾಪುರ ಬಳಿಯ ತಿಕೋಟಾ ಮತ್ತು ಬೆಳಗಾವಿ ತಾಲ್ಲೂಕಿನ ಅಲರವಾಡ ಮುಂತಾದ ೧೦ ಗ್ರಾಮಗಳ ಗುಂಪು(೧೭) ಕುರುಂದವಾಡ್ ಜೂನಿಯರ್ ಅಥವಾ ಬೆಳಗಾವಿ ಬಳಿಯ ವಡಗಾಂವ್(೧೮) ಇಡೀ ಮೈಸೂರು ಸಂಸ್ಥಾನ (೧೯) ಜತ್ತ ಸಂಸ್ಥಾನ (೨೦) ಅಕ್ಕಲಕೋಟ ಸಂಸ್ಥಾನ. ಇದರಲ್ಲಿ ಜತ್ತ ಮತ್ತು ಅಕ್ಕಲಕೋಟೆಗಳೇ ಅಲ್ಲದೇ ಮೂಲ ಕನ್ನಡ ಪ್ರದೇಶಗಳೂ ಆಗಿದ್ದ ಸಾಂಗ್ಲಿ ಸಂಗವಳಿ ಮತ್ತು ಮೀರಜ್ ಮೂಲ ಸಂಸ್ಥಾನಗಳೂ ಸೊಲ್ಲಾಪುರ (ಸೊನ್ನಲಿಗೆ) ಮತ್ತು ಕೊಲ್ಲಾಪುರ (ಕರವೀರ) ಜಿಲ್ಲೆಯ ಹಲವು ತಾಲ್ಲೂಕುಗಳು ಮುಂಬೈ, ಪುಣೆ ಮರಾಠಿ ಸಂಸ್ಕೃತಿಗಳ ಪ್ರಬಲ ಪ್ರಭಾವದಿಂದ ಕನ್ನಡಿಗರ ಕೈತಪ್ಪಿದವು.

ಇದು ಒಡೆದ ಕನ್ನಡಿಯ ಚಿತ್ರ, ಒಂದೊಂದು ಕನ್ನಡಿಯ ಚಿತ್ರ, ಒಂದೊಂದು ಕನ್ನಡಿಯ ಚೂರಿಗೆ ಒಂದೊಂದು ಬಣ್ಣ. ಮುಂಬೈ ರಾಜ್ಯದ ಭಾಗಗಳಲ್ಲಿ ಮರಾಠಿಯ ಪ್ರಾಬಲ್ಯ. ಹೈದರಾಬಾದ್ ರಾಜ್ಯದಲ್ಲಿ ಉರ್ದುವಿನ ಸಾರ್ವಭೌಮತ್ವ ಬಳ್ಳಾರಿಗೆ ತೆಲುಗಿನ ಜಮೀನ್ದಾರಿಕೆ. ಕೊಳ್ಳೇಗಾಲದಲ್ಲಿ ತಮಿಳಿನ ಮೇಲ್ಮೆ. ಮಂಗಳೂರಿನ ಮಲೇರಿಯಾಕ್ಕೆ ದೂರದ ಮದ್ರಾಸಿನಿಂದ ಕಷಾಯ ತರಬೇಕು. ಹುಬ್ಬಳ್ಳಿಯಲ್ಲಿ ಬರಬಿದ್ದರೆ ಬೊಂಬಾಯಿಯಿಂದ ಗಂಜಿಕಾಯಿಸುವ ಆಜ್ಞೆ ಬರಬೇಕು. ಮಂಗಳೂರಿನ ಬಳ್ಳಾರಿಯ ಅಳಲು ತೆಲುಗು, ತಮಿಳರ ಅಟ್ಟಹಾಸದ ನಡುವೆ ಕ್ಷೀಣವೋ ಕ್ಷೀಣ. ಮರಾಠಿ, ಗುಜರಾತಿಗಳ ಕುಸ್ತಿಯ ನಡುವೆ ಹುಬ್ಬಳ್ಳಿಯವರು ಬರಿ ನಿತ್ರಾಣ, ಏನು ಸವಲತ್ತು ಬೇಕಾದರೂ ಇಲ್ಲಿನ ಕೂಗು ಅಲ್ಲಿಗೆ ಹೋಗುವುದು ಬಲು ಕಷ್ಟ. ತಪ್ಪು ಮಾಡಿದವನಿಗೆ ಕೊಪ್ಪಕ್ಕೆ ಹಾಕು ಎಂಬಂತೆ, ಮುಂಬೈ ಮದ್ರಾಸ್ ರಾಜ್ಯಗಳಲ್ಲಿ ಬಹು ಸಂಖ್ಯರಿರುವ ಕನ್ನಡೇತರ 'ಅಪರಾಧಿ' ಅಧಿಕಾರಿಗಳಿಗೆ ಕನ್ನಡ ಜಿಲ್ಲೆಗಳಿಗೆ ವರ್ಗಾವಣೆ! ಇಲ್ಲಿನ ಭಾಷೆ ಬಾರದ ಅಧಿಕಾರಿಗಳು ಜನರ ಜೊತೆಗೆ ಬೆರೆಯದೆ, ಸ್ಪಂದಿಸದೆ, ತಾನಾಯಿತು, ತನ್ನ ಕಛೇರಿ, ಬಂಗ್ಲೆ, ಕ್ಲಬ್ಬಾಯಿತೆಂದು ವಿಶ್ರಾಂತನಂತೆ ಕಾಲಕಳೆದರೆ ಕನ್ನಡಿಗರದು ಅನಾಥ ಜೀವನ. ಜಮಖಂಡಿಯಿಂದ ನೂರು ಮೈಲಿಗೂ ದೂರದ ದ್ವೀಪ ಕುಂದಗೋಳ ಮಹಲು, ಕಟಕೋಳ, ತೊರಗಲ್‌ಗಳೂ ಸೊಲ್ಲಾಪುರದಿಂದ ದೂರವಿದ್ದ ದ್ವೀಪಗಳೇ. ಹಾಗೇ ಸಾಂಗ್ಲಿಗೆ ಶಿರಹಟ್ಟಿ, ಮೀರಜ್‌ಗೆ ಲಕ್ಷ್ಮೇಶ್ವರ, ಕುರಂದವಾಡಕ್ಕೆ ತಿಕೋಟಾ, ಔಂಧ್‌ಗೆ ಗುಣದಾಳು, ಮಳೆಗಾಲದಲ್ಲಿ ಸಂಸ್ಥಾನದ ಕೇಂದ್ರಕ್ಕೂ ದೂರದ ದ್ವೀಪಕ್ಕೂ ಸಂಬಂಧವೇಇರದ ಸ್ಥಿತಿ. ರೈಲು ಸಂಪರ್ಕ ಇತ್ತು. ಮಹಾಪೂರ ಬಂದು ಬೆಳೆ ನಷ್ಟವಾಗಿದೆಯೆಂದೂ ಕಂದಾಯ ವಿನಾಯ್ತಿ (ಸೂಟ) ಮಾಡಬೇಕೆಂದೂ ಕುಂದಗೋಳದ ರೈತ ಜಮಖಂಡಿಗೆ ಹೋಗಿ (ರೈಲಿನಿಂದ ಕುಡಚಿ, ಅಲ್ಲಿಂದ ಬಸ್ ಪ್ರಯಾಣ) ಮನವಿ ಮಾಡಲು ಕೊಡುವ ಪ್ರಯಾಣದ ಹಾಸಲು ಕಂದಾಯಕ್ಕೂ ಹೆಚ್ಚು. ಬಹುಪಾಲು ಸಂಸ್ಥಾನಗಳು ಮರಾಠಿ ಸಂಸ್ಥಾನಿಕರವೇ ಆಗಿ ಶಿಕ್ಷಣ ಆಡಳಿತ ಕನ್ನಡದಲ್ಲಿ ನಡೆಸಬೇಕೆಂದು ನಡೆಸಿದ ಹೋರಾಟದ ಕತೆ ಕುರುಕ್ಷೇತ್ರದ ತುಣುಕುಗಳಂತೆ ಎನ್ನಬೇಕು. ಏಕೀಕರಣ ಚಳುವಳಿಯ ಗಣ ನಾಯಕರ ಬೆಂಬಲವಿಲ್ಲದಿದ್ದರೆ ಈ ಎಲ್ಲ ಬೇಡಿಕೆಗಳು ಕೊನೆಯಿಲ್ಲದ ಅರಣ್ಯರೋಧನಗಳೇ ಆಗುತ್ತಿದ್ದವು.

ಈ ವಾತಾವರಣದಲ್ಲಿ ಬೆಳೆದುದು ಏಕೀಕರಣ ಚಳವಳಿ. ಮೈಸೂರು ಸಂಸ್ಥಾನದಲ್ಲಿ 1799ರಲ್ಲಿ ಮುಮ್ಮಡಿ ಕೃಷ್ಣರಾಜರಿಗೆ ಪಟ್ಟವಾಗಿ ಕನ್ನಡ ಭಾಷೆ, ಸಾಹಿತ್ಯ, ಮುದ್ರಣ, ಶಿಕ್ಷಣ, ಆಡಳಿತದಲ್ಲಿ ಕನ್ನಡಕ್ಕೆ ಅದೇ ರೀತಿ ಕನ್ನಡ ನಾಟಕ, ಸಂಗೀತಗಳಿಗೆ ಬೆಂಬಲ ಕೊಟ್ಟಿದ್ದು ಅವರೇ, ಕನ್ನಡದ ಕಣಕ್ಕೆ ಅವರು ಭದ್ರ ಮೇಟಿ ಕಂಬವಾದುದು ಕನ್ನಡಿಗರ ಪೂರ್ವ ಪುಣ್ಯ. ಕನ್ನಡದ ತುಣುಕುಗಳನ್ನು ಸೆಳೆಯುವ ಅಯಸ್ಕಾಂತ ವಾಯಿತು. ಮೈಸೂರು ಸಂಸ್ಥಾನ ಇಲ್ಲವಾದರೆ ಏಕೀಕರಣ ಕನಸೇ ಆಗುತ್ತಿತ್ತು. ಮೈಸೂರಿನ ಅರಸರು ಕನ್ನಡಿಗರಾಗಿರದಿದ್ದರೆ ಪರಿಸ್ಥಿತಿಯೂ ಬೇರೆ ಆಗಿರುತ್ತಿತ್ತು.

ಧಾರವಾಡದಲ್ಲಿ ರಾ.ಹ. ದೇಶಪಾಂಡೆಯವರು ಸ್ಥಾಪಿಸಿದ್ದ ವಿದ್ಯಾವರ್ಧಕ ಸಂಘದಲ್ಲಿ ೧೯೦೩ರಲ್ಲಿ ಭಾಷಣ ಮಾಡಿದ (ಆಗ ಬೆಂಗಳೂರಲ್ಲಿ ನೆಲಸಿ, ಮೂಲತಃ ಮಂಗಳೂರಿನವರಾಗಿದ್ದು ಮದ್ರಾಸ್‌ನಲ್ಲಿ ಅಧಿಕಾರಿಯಾಗಿದ್ದು ನಿವೃತ್ತರಾಗಿದ್ದ ಬೆನಗಲ್ ರಾಮರಾಯರು ಕನ್ನಡ ಭಾಷಿಕ ನೆಲವೆಲ್ಲ ಏಕಾಡಳಿತಕ್ಕೆ ಸೇರಬೇಕೆಂಬ ಆಶಯ ವ್ಯಕ್ತಪಡಿಸಿದರು. ಇಂಥದೇ ಮಾತು ಇದೇ ಸ್ಥಲದಲ್ಲಿ ಬೆಂಗಳೂರಿನ ಜಸ್ಟಿಸ್ ಸೆಟ್ಲೂರದಿಂದ ೧೯೦೬ರಲ್ಲಿ ಬಂತು. ಮುಂದೆ ಬ್ರಿಟಿಷರ ವಿರುದ್ಧ ಚಳುವಳಿ ಬಿಸಿಯೇರಿ, ಸ್ವದೇಶೀ ಚಳುವಳಿ ಬಲವಾದಾಗ ಬಂಗಾಳದಂತೆ ಕರ್ನಾಟಕವೂ ಒಂದಾಗಬೇಕೆಂಬ ಕೂಗು ಕೇಳಿ ಬಂತು. ೧೯೦೭ಹಾಗೂ ೧೯೦೮ ರಲ್ಲಿ ಇದೇ ವಿದ್ಯಾವರ್ಧಕ ಸಂಗದಲ್ಲಿ ಕನ್ನಡ ಗ್ರಂಥಕರ್ತರ ಸಮ್ಮೇಳನವನ್ನು ಆಲೂರು ವೆಂಕಟರಾಯರು ಏರ್ಪಡಿಸಲು ಇಂದಿನ ಕರ್ನಾಟಕದ ಮೂಲೆಮೂಲೆಗಳಿಂದ (ಸಂಸ್ಥಾನ ಗಳಿಂದಲೂ) ಬಂದ ಲೇಖಕರಲ್ಲಿ ಬಾಂಧವ್ಯ ಬೆಳೆಯಿತು. ೧೯೧೧ರಲ್ಲಿ ವಂಗಭಂಗ ರದ್ದಾಗಿ, ಬಂಗಾಳ ಒಂದಾಗಿ, ಅಸಾಂ, ಒರಿಸ್ಸಾ, ಬಿಹಾರಗಳು ಪ್ರತ್ಯೇಕ ಪ್ರಾಂತಗಳದಾಗ ಪ್ರಾಂತ್ಯಗಳದಾಗ ಭಾಷಾವಾರು ರಾಜ್ಯಗಳ ಕಲ್ಪನೆಗೆ ರೆಕ್ಕೆಪುಕ್ಕ ಬಂತು.

ಆಲೂರರೂ ಬೆಂಗಳೂರಿನ ಕರ್ಪೂರ ಶ್ರೀನಿವಾಸರಾಯರೂ (ಇವರು ಮೈಸೂರಿನಲ್ಲಿ ಚೀಫ್ ಇಂಜಿನಿಯರ್ ಆಗಿದ್ದರು) ಯತ್ನಿಸಿ ದಿವಾನ್ ವಿಶ್ವೇಶ್ವರಯ್ಯನವರ ೧೯೧೩ರಲ್ಲಿ ಸ್ಥಾಪಿಸಿದ್ದ ಕರ್ನಾಟಕ ಸಾಹಿತ್ಯ ಪರಿಷತ್ತು (ಈಗ ಕನ್ನಡ ಸಾಹಿತ್ಯ ಪರಿಷತ್ತು) ಸ್ಥಾಪಿಸಿ ಪರಿಷತ್ತು ಪ್ರತಿ ವರ್ಷ ಸಾಹಿತ್ಯ ಸಮ್ಮೇಳನ ನಡೆಸಿ ಕನ್ನಡ ಲೇಖಕರ, ಪತ್ರಕರ್ತರ, ಬುದ್ಧಿಜೀವಿಗಳ ಒಗ್ಗೂಡಿಕೆಗೆ ನೆರವಾಗಿ, ಈ ವರ್ಗ ಮೂಡಿಸಿದ ಏಕೀಕರಣದ ಬೇಡಿಕೆ ರಾಜಕಾರಣಿಗಳೂ (ಅಂದಿನ ಸ್ವಾತಂತ್ರ್ಯ ಯೋಧರು)

ಧಾರವಾಡದಲ್ಲಿ ಆಲೂರರು, ಹೊನ್ನಾಪುರ ಮಠರು, ಮುದುವೀಡು ಕೃಷ್ಣರಾಯರು ಇವರೆಲ್ಲ ಸೇರಿ ಏಕೀಕರಣ ಸಭೆಯನ್ನು ಸ್ಥಾಪಿಸಿದರು. ೧೯೧೬ರಲ್ಲಿ ತಿಲಕರು ಹೋಮ್‌ರೂಲ್ ಲೀಗ್ ಸ್ಥಾಪಿಸಿದ ಅವರ ಒಂದು ಕರ್ನಾಟಕ ಘಟಕವನ್ನು ತೆರೆಯಬೇಕೆಂದು ಆಲೂರರು ಒತ್ತಾಯಿಸಲು ಬೆಳಗಾವಿಯ ಬೆಳವಿದತ್ತರಾಯರ ಅಧ್ಯಕ್ಷತೆಯಲ್ಲಿ ಆಗಿನ ಕರ್ನಾಟಕದ ಘಟಕ ಸ್ಥಾಪನೆ ಆಯಿತು.

'ಕರ್ನಾಟಕ ಗತವೈಭವ' ಆಲೂರರು ೧೯೧೭ರಲ್ಲಿ ಪ್ರಕಟಿಸಿದ ಪುಸ್ತಕ ಕನ್ನಡಿಗರನ್ನು ಬಡಿದೆಬ್ಬಿಸಿದ ಕೃತಿಯಾಯಿತು. ಇದಲ್ಲದೆ ನಾಡಿನ ಉದ್ದಗಲಕ್ಕೂ-ಸುರಪುರದ ಬಳಿಯರಂಗಂ ಪೇಟೆಯಿಂದ ದಕ್ಷಿಣದ ಪುತ್ತೂರಿನವರೆಗೆ– ಸ್ಥಾಪನೆಯಾದ ಕರ್ನಾಟಕ ಸಂಘಗಳು ಕರ್ನಾಟಕತ್ವದ ಜಾಗೃತಿಗೆ ಶ್ರಮಿಸಿದವು. (ನಾಡಹಬ್ಬ ವಾಗಿ ದಸರೆಯನ್ನು ಆಚರಿಸಿದವು)

ಬೆಂಗಳೂರಿನ ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ ಇಲ್ಲಿ ಉಲ್ಲೇಖನೀಯ. ಮುಂದೆ ೧೯೨೦ರಲ್ಲಿ ನಾಗಪುರ ಕಾಂಗ್ರೆಸ್ ನಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ(ಕೆ.ಪಿ.ಸಿ.ಸಿ) ಯನ್ನು ಗಂಗಾಧರ ರಾವ್ ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಿದ್ದು ಒಂದು ಪ್ರಮುಖ ಘಟ್ಟವಾಯಿತು.

ಬಿ.ಎಂ.ಶ್ರೀ. ಪಂಡಿತ ಶಿವಮೂರ್ತಿಶಾಸ್ತ್ರಿ, ಅ.ನ.ಕೃ., ಜಿ.ಪಿ. ರಾಜರತ್ನಂ, ಮುಂತಾದ ಹಳೇಮೈಸೂರಿನ ಸಾಹಿತಿಗಳು ಏಕೀಕರಣ ಪರ ಎಲ್ಲೆಡೆ ಸಂಚರಿಸಿ ಪ್ರತಿಪಾದಿಸಿದರು.

ಬಿ.ಎಂ.ಶ್ರೀಯವರ 'ಕನ್ನಡ ಬಾವುಟ' ಪ್ರಸಿದ್ಧ ರಚನೆಯಾಯಿತು. ೧೯೨೪ರಲ್ಲಿ ಬೆಳಗಾವಿಯಲ್ಲಿ ಅ.ಭಾ. ಕಾಂಗ್ರೆಸ್ ಅಧಿವೇಶನ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆದಾಗ, ಅಲ್ಲಿಯೂ ಅವರ ನಂತರ ಪ್ರಥಮ ಕರ್ನಾಟಕ ಏಕೀಕರಣ ಸಮ್ಮೇಳನ ಸರ್ ಸಿದ್ದಪ್ಪ ಕಂಬಳಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಇಂಥ ಸಮ್ಮೇಳನಗಳು ಮುಂದೆ ಬಳ್ಳಾರಿ(೧೯೨೬), ಧಾರವಾಡ (೧೯೨೮), ಬೆಳಗಾವಿ(೧೯೨೯) ಹುಕ್ಕೇರಿ(೧೯೩೧) ಧಾರವಾಡ(೧೯೩೬), ಸೊಲ್ಲಾಪುರ(೧೯೪೦), ಧಾರವಾಡ (೧೯೪೪) ಮುಂಬೈ (೧೯೪೦) ಇಲ್ಲೆಲ್ಲ ನಡೆದವು. ಕಾಂಗ್ರೆಸ್ ೧೯೩೭ರ ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಭಾಷಾವಾರು ಪ್ರಾಂತರಚನೆ ಯನ್ನು ಗುರಿಯಾಗಿ ಹೇಳಿತು ಮೈಸೂರು ಕಾಂಗ್ರೆಸ್ ಏಕೀಕರಣ ವನ್ನು ಬೆಂಬಲಿಸಿತು.

ಮುಂದೆ ದೇಶ ಸ್ವತಂತ್ರವಾದಾಗ ಕಿರು ಸಂಸ್ಥಾನಗಳೆಲ್ಲ ನೆರೆಯ ಜಿಲ್ಲೆಗಳಲ್ಲಿ ಐಕ್ಯವಾಗಿ (ಸೊಂಡೂರು ಬಳ್ಳಾರಿ ಜಿಲ್ಲೆಯಲ್ಲಿ, ರಾಮದುರ್ಗ ಬೆಳಗಾವಿ ಜಿಲ್ಲೆಯಲ್ಲಿ, ಇತ್ಯಾದಿ) ಕರ್ನಾಟಕ ಮುಂಬೈ ಪ್ರಾಂತ, ಮದ್ರಾಸ್ ಪ್ರಾಂತ, ಹೈದ್ರಾಬಾದ್, ಮೈಸೂರು ಹಾಗೂ ಕೊಡಗು ಹೀಗೆ ಐದು ಘಟಕಗಳಲ್ಲಿ ಹಂಚಿಹೋದರೂ ಸ್ವಾತಂತ್ರ್ಯದ ಹಿಂದೆಯೇ ಏಕೀಕರಣವಾಗಬಹುದೆಂಬ ಕನಸು ದೂರ ಉಳಿಯಿತು. ಕರ್ನಾಟಕ ಏಕೀಕರಣ ಮಹಾ ಸಮಿತಿಯ ಎಸ್.ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ರೂಪು ತಾಳಿತು. (1947) ಅಂದಾನಪ್ಪ ದೊಡ್ಡಮೇಟಿ ಹಾಗೂ ಮಂಗಳವೇಡೆ ಶ್ರೀನಿವಾಸರಾಯರು ಇದರ ಕಾರ್ಯದರ್ಶಿಗಳು, ಸಾಹಿತಿ ಶ್ರೀರಂಗರು ಕಾರ್ಯಾಧ್ಯಕ್ಷರು ಅಲ್ಲದೆ ಕಾಸರಗೋಡಿನಲ್ಲಿ ರಂಗನಾಥ ದಿವಾಕರ ಅಧ್ಯಕ್ಷತೆಯಲ್ಲಿ 1947ರಲ್ಲಿ ಏಕೀಕರಣ ಸಮ್ಮೇಳನವಾಯಿತು.

ಆದರೆ ಜೈಪುರದಲ್ಲಿ 1948ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಭಾಷಾವಾರು ಪ್ರಾಂತದ ಪ್ರಶ್ನೆಯ ಬಗ್ಗೆ ಪರಿಶೀಲನೆಗೆ ನೇಮಿಸಿದ ಜೆ.ವಿ.ಪಿ. ಸಮಿತಿ ಈ ಪ್ರಶ್ನೆಯನ್ನು ಅಷ್ಟೊಂದು ತುರ್ತಾಗಿ ಪರಿಶೀಲಿಸಬೇಕಾಗಿಲ್ಲವೆಂದಿತು! ಕೇಂದ್ರ ನೇಮಿಸಿದ ಧರ್ ಆಯೋಗ ಕೂಡ ಭಾಷಾವಾರು ರಾಜ್ಯ ರಚನೆ ಸದ್ಯಕ್ಕೆ ಬೇಡ ವೆಂದಿತು.

ಆದರೆ ಜೈಪುರದಲ್ಲಿ 1948ರಲ್ಲಿ ನಡೆದ ಕಾಂಗ್ರೆಸ್ ಅಧಿವೇಷನ ಭಾಷಾವಾರು ಪ್ರಾಂತ್ಯದ ಪ್ರಶ್ನೆಯ ಬಗ್ಗೆ ಪರಿಶೀಲನೆಗೆ ನೇಮಿಸಿದ ಜೆ.ವಿ.ಪಿ. ಸಮಿತಿ ಈ ಪ್ರಶ್ನೆಯನ್ನು ಅಷ್ಟೊಂದು ತುರ್ತಾಗಿ ಪರಿಶೀಲಿಸಬೇಕಾಗಿಲ್ಲವೆಂದಿತು! ಕೇಂದ್ರ ನೇಮಿಸಿದ ಧರ್ ಆಯೋಗ ಕೂಡ ಭಾಷಾವಾರು ರಾಜ್ಯ ರಚನೆಗೆ ಸದ್ಯಕ್ಕೆ ಬೇಡವೆಂದಿತು.

ಆದರೆ 1951–52ರಲ್ಲಿ ಮಹಾಚುನಾವಣೆಯ ಕಾಲಕ್ಕೆ ತನ್ನ ಪ್ರಣಾಳಿಕೆಯಲ್ಲಿ ಏಕೀಕರಣದ ಗುರಿಯನ್ನು ಕಾಂಗ್ರೆಸ್ ಪ್ರಕಟಿಸಿತು. ಆಗಲೇ ಏಕೀಕರಣ ಪಕ್ಷ ರಾಮಕೃಷ್ಣ ಕಾರಂತರ ಅಧ್ಯಕ್ಷತೆಯಲ್ಲಿ ಸಂಘಟಿತವಾಗಿ ಸ್ಪರ್ಧಿಸಿದರೂ, ಕಾಂಗ್ರೆಸ್ ಪಕ್ಷವೇ ಗುರಿಸಾಧಿಸುವೆಂದು ಜನರು ನಂಬಿ ಕಾಂಗ್ರೆಸ್ಸಿಗೆಲ್ಲಾ ಬೆಂಬಲವಿತ್ತರು. ಚುನಾವಣೆ ಗೆದ್ದ ಕಾಂಗ್ರೆಸ್ ಮುಂದೆ ಈ ಬಗ್ಗೆ ಏನನ್ನೂ ಮಾಡುವ ಲಕ್ಷಣ ಕಾಣಿಸಲಿಲ್ಲ. 1953ರಲ್ಲಿ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ ರೂಪಿತವಾಗಿ 1953ರ ಮೇ ತಿಂಗಳಲ್ಲಿ ಏಕೀಕರಣದ ಬೇಡಿಕೆಯನ್ನು ಬಲವಾಗಿ ಮುಂದಿಟ್ಟು ಸತ್ಯಾಗ್ರಹ ನಡೆಸಿತು. ಐದು ಸಾವಿರ ಜನ ಬಂಧಿತರಾದರು. ಲಾಠಿಯೇಟು ತಿಂದರು; ಜೈಲಲ್ಲಿ ಉಪವಾಸವಿದ್ದರು. ತಂಗಳು ರೊಟ್ಟಿ ಉಂಡರು! ವಾಲಿ ಚನ್ನಪ್ಪ, ಬೆಂಕಿಸ್ವಾಮಿ(ಚಿನ್ಮಯ ಸ್ವಾಮಿ ಓಂಕಾರಮಠ,) ಶಾಂತಿನಾಥ ಇಂಗಳೆ, ತಲ್ಲೂರು ರಾಯನಗೌಡ, ಇಟಗಿ ವೇದಮೂರ್ತಿ, ವೀರಭದ್ರಪ್ಪ ಶಿರೂರ, ಅಳವಂಡಿ, ಶಿವಮೂರ್ತಿಸ್ವಾಮಿ, ಹೀಗೆ ಹಲವು ನಾಯಕರು ಈ ಸತ್ಯಾಗ್ರಹದ ನೇತೃತ್ವ ವಹಿಸಿದ್ದರು.

ಅದೇ ವರ್ಷ ಪೊಟ್ಟಿ ಶ್ರೀರಾಮುಲು ಎಂಬ ಆಂಧ್ರದ ನಾಯಕರು ಆಂಧ್ರ ಪ್ರಾಂತ ರಚನೆಯಾಗಬೇಕೆಂದು ಆಮರಣ ಉಪವಾಸ ಮಾಡಿ ನಿಧನರಾದರು. ಆಂಧ್ರದಲ್ಲಿ ಅಭೂತಪೂರ್ವ ಹಿಂಸಾಚಾರವಾಗಿ, ಮುಂದೆ ಆಂಧ್ರಪ್ರಾಂತವನ್ನು, ಕರ್ನೂಲನ್ನು ರಾಜಧಾನಿಯಾಗಿ ಮಾಡಿ ರಚಿಸಿದರು. ಆಗ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳನ್ನು ಮೈಸೂರು ರಾಜ್ಯಕ್ಕೆ ವರ್ಗಾಯಿಸಿದರು.





ಆದರೂ ಕರ್ನಾಟಕ ಉದಿಸುವ ಲಕ್ಷಣ ಕಾಣಿಸಲಿಲ್ಲ. ಧಾರವಾಡ ಮತ್ತು ಹುಬ್ಬಳ್ಳಿಗಳಿಂದ ಮುಂಬೈ ವಿಧಾನಸಭೆಗೆ ಉಪ ಚುನಾವಣೆ ನಡೆದ್ದು ಕಾಂಗ್ರೆಸ್ ಸೋತಿತು. ಏಕೀಕರಣ ಪರ ಪಕ್ಷದ ಉಮೇದುವಾರರು ಗೆದ್ದರು. ಹುಬ್ಬಳ್ಳಿ ಬಳಿಯ ಅದರಗುಂಚಿಯಲ್ಲಿ ಶಂಕರಗೌಡ ಪಾಟೀಲರು ಏಕೀಕರಣ ಪರ ಆಮರಣ ಉಪವಾಸ ಆರಂಭಿಸಿದರು. ಅದೇ ಕಾಲಕ್ಕೆ ಹುಬ್ಬಳ್ಳಿಯಲ್ಲಿ ಕೆ.ಪಿ.ಸಿ.ಸಿ. ಸಭೆ ನಡೆದಾಗ ಏಕೀಕರಣ ಪರ ಭಾರೀ ಪ್ರದರ್ಶನವಾಗಿ, ಹಿಂಸಾಚಾರವೂ ಆಯಿತು. ಸಾವಿರಾರು ರೈತರು ಈ ಪ್ರದರ್ಶನದಲ್ಲಿ ಸುತ್ತಲ ಹಳ್ಳಿಗಳಿಂದ ಬಂದು ಪಾಲ್ಗೊಂಡರು.

ಈ ಪ್ರತಿಭಟನೆಯ ಹಿನ್ನಲೆಯಲ್ಲಿ ಕೇಂದ್ರವು ಫಜಲ್ ಆಲಿ ತ್ರಿಮೂರ್ತಿ ಆಯೋಗ ನೇಮಿಸಿತು (ಡಿಸೆಂಬರ್, 1953) ಇದೇ ಕಾಲಕ್ಕೆ ಮೈಸೂರು ಪ್ರಾಂತದಲ್ಲಿ ಕೆಲವು ರಾಜಕಾರಣಿಗಳೂ ನಿವೃತ್ತ ಅಧಿಕಾರಿಗಳು ಏಕೀಕರಣ ವಿರೋಧಿಸಿದರು. ಕೆಲವರು ಎರಡು ಕರ್ನಾಟಕದ ಮಾತನ್ನಾಡಿದರು. ಡಿ.ವಿ.ಜಿ. ಯಂಥ ಹಿರಿಯರು ನಾಲ್ಕು ಕರ್ನಾಟಕಗಳು ಆಗಲೆಂದರು. 'ವಿಶ್ವಾಮಿತ್ರ' ಎಂಬ ಪತ್ರಿಕೆ ಬೆಂಗಳೂರಿನಿಂದ ಕರ್ನಾಟಕ ಏಕೀಕರಣವನ್ನು ವಿರೋಧಿಸಿತು. ಮೈಸೂರು ಸರಕಾರ ನೇಮಿಸಿದ ಶೇಷಾದ್ರಿ ಸಮಿತಿ ಕೂಡ ಹೊಸ ಪ್ರಾಂತ್ಯದಲ್ಲಿ ಮೈಸೂರು ಪ್ರಾಂತ ಸೇರಬಾರದೆಂದಿತು!.

ತ್ರಿಮೂರ್ತಿ ಆಯೋಗ ಏಕೀಕರಣವನ್ನು ಸಮರ್ಥಿಸಿದರೆ, ಮೈಸೂರಿನ ಮುಖ್ಯಮಂತ್ರಿ ಹನುಮಂತಯ್ಯನವರು ಏಕೀಕರಣ ವನ್ನು ಬೆಂಬಲಿಸಿದ ಕಾರಣಕ್ಕಾಗಿ ಮುಖ್ಯಮಂತ್ರಿ ಪದವಿಯನ್ನು ಕಳೆದುಕೊಳ್ಳಬೇಕಾಯಿತು. ಅವರು ವಿರೋಧ ಪಕ್ಷದ ನಾಯಕ ಜೆ.ಎಂ. ಇಮಾಮರೂ... ಏಕೀಕರಣದ ಪರವಾಗಿ ಬಲವಾಗಿ ಪ್ರಚಾರ ಮಾಡಿದ್ದರು. ಮುಂದೆ ಕಾಂಗ್ರೆಸ್ ಹೈಕಮಾಂಡ್ ನೀಡಿದ 'ವ್ಹಿಪ್' ನಂತೆ ಮೈಸೂರಿನ ವಿಧಾನಸಭೆ ಏಕೀಕರಣ ವನ್ನು ಬೆಂಬಲಿಸಿತು. ಕೊಡಗಿನಲ್ಲೂ 1952ರ ಚುನಾವಣೆಯಲ್ಲೇ ಏಕೀಕರಣ ವಿರೋಧ ಪಕ್ಷ ವಿಧಾನಸಭೆಯ 24ರಲ್ಲಿ 9 ಸ್ಥಾನಗಳನ್ನು ಗೆದ್ದಿದ್ದರೂ ಮುಂದೆ ಏಕೀಕರಣ ಪರ ಒಮ್ಮತದ ಠರಾವು ಮಾಡಿತು. 1956ರ ನವೆಂಬರ್ 1ಕ್ಕೆ ಏಕೀಕೃತ ರಾಜ್ಯ 'ವಿಶಾಲ ಮೈಸೂರು' ಎಂಬ ಹೆಸರಿನಿಂದ ಉದಿಸಿತು. ಅದು 'ಕರ್ನಾಟಕ' ಎನಿಸಲು 1973ರ ವರೆಗೆ ಕಾಯಬೇಕಾಯಿತು. ಈ ನಡುವೆ ಬಳ್ಳಾರಿ ನಗರದ ವ್ಯಾಜ್ಯ ಹಲವಾರು ಸಮಸ್ಯೆಗಳನ್ನು ಒಡ್ಡಿತ್ತಾದರೂ ಕಡೆಗೆ ಕರ್ನಾಟಕದಲ್ಲಿ ಬಳ್ಳಾರಿ ಉಳಿಯಿತು. ಆಲೂರು, ಆದವಾನಿ, ರಾಯದುರ್ಗ ಕಾಸರಗೋಡು ತಾಲ್ಲೂಕುಗಳು ಕರ್ನಾಟಕದ ಕೈತಪ್ಪಿದವು. ಮಡಕಶಿರಾ, ಹೊಸೂರುಗಳಂಥ ಅಚ್ಚಕನ್ನಡ ತಾಲ್ಲೂಕುಗಳು ಕೈಬಿಟ್ಟವು. ಮೈಸೂರಿನಲ್ಲಿ ಹನುಮಂತಯ್ಯನವರಂಥ ಕರ್ನಾಟಕ ಪರ ವ್ಯಕ್ತಿ ಅಧಿಕಾರ ಕಳೆದುಕೊಂಡು ಏಕೀಕರಣ ವಿರೋಧಿಗಳು ಮುಖ್ಯಮಂತ್ರಿಗಳಾದುದು ಅಲ್ಲಿನ ನಾಯಕತ್ವದ ದೌರ್ಬಲ್ಯಕ್ಕೆ ಕಾರಣವಾಯಿತು. ನಮ್ಮದಾಗಿರುವ ಭಾಗಗಳಿಗಾಗಿ ಏಕೀಕರಣದ ಪೂರ್ವದಲ್ಲೇ ಹಕ್ಕು ಪ್ರಸ್ತಾಪ, ಒತ್ತಾಯ ಮಾಡಲಾಗಲಿಲ್ಲ. ಕಾಸರಗೋಡು ಕೈತಪ್ಪಿದ್ದಂತು ಮಹಾದುರಂತ.

ಅಂತೂ ಇಂತೂ ಕರ್ನಾಟಕ ರಾಜ್ಯ ಬಂತು. ರಾಷ್ಟ್ರಪತಿ ರಾಜೇಂದ್ರಪ್ರಸಾದರು ಇದರ ಉದ್ಘಾಟನೆ ಮಾಡಿದರು. ಪ್ರಥಮ ಮುಖ್ಯಮಂತ್ರಿ ನಿಜಲಿಂಗಪ್ಪನವರು, ನಾವು ಅನೇಕ ಶತಮಾನಗಳಿಂದ ಬಯಸುತ್ತಿದ್ದ ಕನ್ನಡ ರಾಜ್ಯ ಈಗ ನಮಗೆ ಲಭಿಸಿದೆ. ನಾವೆಲ್ಲರೂ ಒಟ್ಟಿಗೆ ಬದುಕಿ, ಒಟ್ಟಿಗೆ ಅನುಭವಿಸಿ, ಒಟ್ಟಿಗೆ ಶಕ್ತಿಸಂಪನ್ನತೆಯನ್ನು ಪಡೆಯೋಣ. ನಮ್ಮ ಜೀವನದಲ್ಲಿ ತೇಜಸ್ಸರು ಉದ್ಭವಿಸಿ ಇಡೀ ಭಾರತದ ಜೀವನವನ್ನು ಜಾಜ್ವಲ್ಯಗೊಳಿಸಲಿ ಎಂದು ಪ್ರಾರ್ಥಿಸಿದರು.

1956ರ ನವೆಂಬರ್ 1ರ ಅರುಣೋದಯ ಪೂರ್ವದಲ್ಲಿ ಹಂಪಿಯಲ್ಲಿ ಏಕೀಕರಣ ಉತ್ಸವವನ್ನು ಉತ್ಸಾಹದಿಂದ ಆಚರಿಸಿದ ಆಲೂರರು "ಈಗ ಮೈಸೂರು ರಾಜ್ಯವೆಂದು ತಪ್ಪಾಗಿ ಹೆಸರಿಸಲ್ಪಟ್ಟ ಕರ್ನಾಟಕ ರಾಜ್ಯವು ಆಯುಷ್ಮಾಂತವಾಗಲಿ, ಆರೋಗ್ಯವಂತನಾಗಲಿ ಮತ್ತು ಭಾಗ್ಯವಂತನಾಗಲಿ ಎಂದು ಹಾರೈಸಿದರು.

ಕೃಪೆ: ಸಂಯುಕ್ತ ಕರ್ನಾಟಕ

## ಕನ್ನಡಿಗರ ತಾಯಿ

ತಾಯಿ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ!
ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮ ದಾತೆಯೆ!
ತಮ್ಮ ತಪ್ಪನೆನಿತೊ ತಾಳ್ವೆ, ಅಕ್ಕರೆಯಿಂದೆಮ್ಮ ನಾಳ್ವೆ, ನೀನೆ
ಕಾಣಾ ನಮ್ಮ ಬಾಳ್ವೆ,
ನಿನ್ನ ಮರೆಯಲೆಮ್ಮವು
ತನು ಕನ್ನಡ, ಮನ ಕನ್ನಡ, ನುಡಿ ಕನ್ನಡವೆಮ್ಮವು.

ಹಳೆಯಬೀಡ ಬೇಲನಾಡ ಮಾಡುಮೆನಿತೊ ಸುಂದರಂ!
ಬಿಳಿಯ ಕೊಳದ ಕಾರಕಳದ ನಿಡುಕರೆನಿತೊ ಬಂದುರಂ!
ಇಲ್ಲಿಲ್ಲದ ಶಿಲ್ಪಮಿಲ್ಲ;
ನಿನ್ನ ಕಲ್ಲೆ ನುಡಿವುದಲ್ಲ ! ಹಿಂಗತೆಯಿನಿವಾಲ ಸೊಲ್ಲ
ನೆಮ್ಮ ತೃಷೆಗೆ ದಕ್ಕಿಸು– ಹೊಸತು ಕಿನ್ನರಿಯಲಿ ನಿನ್ನ
ಹಳೆಯ ಹಾಡನುಕ್ಕಿಸು!

ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಮ್, ನೀಗದಂತೆ
ಸಾಗಿಪಂತೆ ನಿನ್ನ ನುಡಿಯ ಡಕ್ಕೆಯಂ, ನಮ್ಮ ದೆಯಮ್
ತಾಯೆ ಬಲಿಸು, ಎಲ್ಲರ ಬಾಯಲ್ಲಿ ನೆಲಸು, ನಮ್ಮ
ಮನಮನೊಂದೆ ಕಲಸು!
ಇದನೊಂದನೆ ಕೋರುವೆ– ನಿನ್ನ ಮೂರ್ತಿ ಜಗತ್ಕೀರ್ತಿ
ಎಂದಿಗೆಮಗೆ ತೋರುವೆ?

–ಗೋವಿಂದ ಪೈ
ಪ್ರಥಮ ರಾಷ್ಟ್ರಕವಿ

# ಕರ್ನಾಟಕ ಏಕೀಕರಣ ಹೋರಾಟ

– ಸಾಹಿತ್ಯರತ್ನ ಅನ್ನದಾನಯ್ಯ ಪುರಾಣಿಕ, ನಂ.೧೯, ೯/ಎ ಮೈನ್, ೩೮ನೇ ಕ್ರಾಸ್, ೫ನೇಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೪೧.

**ಸು**ಮಾರು ಎರಡು ಸಾವಿರ ವರ್ಷಗಳ ಭವ್ಯ ಚರಿತ್ರೆ, ದಿವ್ಯ ಸಾಹಿತ್ಯ, ಕಲೆ, ಸಂಸ್ಕೃತಿಯನ್ನು ಹೊಂದಿರುವ ಕರ್ನಾಟಕವನ್ನು ಆಳಿಹೋದ ಶಾತವಾಹನರು, ಕದಂಬರು, ಚಾಲುಕ್ಯರು; ಗಂಗರು, ರಾಷ್ಟ್ರಕೂಟರು, ಹೊಯ್ಸಳರು ಹಾಗೂ ವಿಜಯನಗರದ ಅರಸರು, ಈ ಪ್ರಾಚೀನ ನಾಡಿನ, ಶೌರ್ಯ, ಸಾಹಸ, ದೇಶಾಭಿಮಾನ, ಸ್ವಾತಂತ್ರ್ಯಪ್ರೇಮ, ಪ್ರಜಾನುರಾಗ, ತ್ಯಾಗ, ಬಲಿದಾನ, ಸೇವಾಸಕ್ತಿ ಹಾಗೂ ಸಮನ್ವಯ ಮನೋಧರ್ಮವನ್ನು ಮೆರೆದು ಹೋಗಿದ್ದಾರೆ. ಕನ್ನಡ ನಾಡಿನ ಧವಳಕೀರ್ತಿಯನ್ನು ಪ್ರಪಂಚದಲ್ಲಿ ಪಸರಿಸಿದ್ದಾರೆ. ಇಮ್ಮಡಿ ಪುಲಕೇಶಿ, ನೃಪತುಂಗ, ವಿಕ್ರಮಾದಿತ್ಯ, ಪ್ರೌಢದೇವರಾಯ ಮತ್ತು ಕೃಷ್ಣದೇವರಾಯ ಮೊದಲಾದ ಚಕ್ರವರ್ತಿಗಳು ವಿಶ್ವದ ಮಹಾನ್ ಚಕ್ರವರ್ತಿಗಳಿಗೆ ಸಮಾನರಾಗಿದ್ದರು.

ಹಿಂದೊಮ್ಮೆ ಕರ್ನಾಟಕದ ಗಡಿಯು ಹಿಮಾಲಯದವರೆಗೆ ಹಬ್ಬಿತ್ತು. 'ಕರ್ನಾಟ ಬಲಂ ಅಜೇಯಂ' ಎಂಬ ಹೆಗ್ಗಳಿಕೆಗೆ ಸೈನ್ಯ ಪಾತ್ರವಾಗಿತ್ತು. ಪಲ್ಲವರನ್ನು ಸೋಲಿಸಿ ಕನ್ನಡ ರಾಜ್ಯವನ್ನು ಸ್ಥಾಪಿಸಿದ ಮಯೂರಶರ್ಮ, ಹರ್ಷವರ್ಧನನ್ನು ಗೆದ್ದ ಇಮ್ಮಡಿ ಪುಲಕೇಶಿ, ಬಂಗಾಲವನ್ನು ಗೆದ್ದ ರಾಷ್ಟ್ರಕೂಟರು, ಉತ್ತರಭಾರತವನ್ನು ಜಯಿಸಿದ ವಿಕ್ರಮಾದಿತ್ಯ, ಸಿಂಹಳವನ್ನು ಸೋಲಿಸಿದ ವಿಜಯನಗರದ ಪ್ರೌಢದೇವರಾಯ. ಕಳಿಂಗವನ್ನು ಜಯಿಸಿದ ಕೃಷ್ಣದೇವರಾಯ, ಔರಂಗಜೇಬನನ್ನು ಎದುರಿಸಿ ಶಿವಾಜಿ ಮಗ ರಾಜಾರಾಮನಿಗೆ ಆಶ್ರಯವಿತ್ತ ಕೆಳದಿ ಚೆನ್ನಮಾಜಿ. ಶಿವಾಜಿ ಸೈನ್ಯವನ್ನು ತಡೆದು ನಿಲ್ಲಿಸಿದ ಬೆಳವಡಿ ಮಲ್ಲಮ್ಮ. ಆಂಗ್ಲರ ವಿರುದ್ಧ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವನ್ನು ಘೋಷಿಸಿದ ವೀರರಾಣಿ ಕಿತ್ತೂರು ಚೆನ್ನಮ್ಮ. ಬ್ರಿಟೀಷರಿಗೆ ಸಿಂಹಸ್ವಪ್ನವಾಗಿದ್ದ ಟೀಪು ಸುಲ್ತಾನ್ ಮೊದಲಾದವರು ಕೆಚ್ಚೆದೆಯ ಕಲಿಗಳು, ಅಪ್ರತಿಮ ಪರಾಕ್ರಮಿಗಳು, ಉಜ್ವಲ ದೇಶಭಕ್ತರು, ಧರ್ಮಬೀರುಗಳು, ಅನುಪಮ ಚರಿತರು, ಆದರ್ಶ ಅರಸರು, ಸಾಹಿತ್ಯ ಕಲಾ ಪೋಷಕರು, ಸಂಸ್ಕೃತಿಯ ಸಂವರ್ಧಕರು ಆಗಿದ್ದರು.

ಕನ್ನಡಕ್ಕೆ ಸಂಸ್ಕೃತದ ಸ್ಥಾನಮಾನವನ್ನು ಒದಗಿಸಿಕೊಟ್ಟ ಪಂಪರನ್ನರು, ಕನ್ನಡವನ್ನು ದೇವವಾಣಿಯನ್ನಾಗಿ ಮಾಡಿದ ಅಲ್ಲಮ, ಬಸವ ಚೆನ್ನಬಸವ ಅಕ್ಕಮಹಾದೇವಿ ಮೊದಲಾದ ವಚನ ಕಾರರು, ಜನಸಾಮಾನ್ಯರನ್ನು ಅಸಾಮಾನ್ಯರನ್ನಾಗಿ ಚಿತ್ರಿಸಿದ ಹರಿಹರ, 'ಸತ್ಯವೇ ಶಿವ'ನೆಂದು ಸಾರಿದ ರಾಘವಾಂಕ, ಅಲ್ಲಮಪ್ರಭು ಸಂಪ್ರದಾಯವನ್ನು ಬೋಧಿಸಿದ ಚಾಮರಸ, ಕೃಷ್ಣನ ವಿರಾಟಸ್ವರೂಪವನ್ನು ಚಿತ್ರಿಸಿದ ಕುಮಾರವ್ಯಾಸ, ಪ್ರಪಂಚದ ಪ್ರಥಮ ವಿಶ್ವಕೋಶವನ್ನು ಸೃಷ್ಟಿಸಿದ ನಿಜಗುಣ ಶಿವಯೋಗಿ, ಕೃಷ್ಣಾಮೃತವನ್ನು ಉಣಬಡಿಸಿದ ಹರಿದಾಸರು, ಜನಪದ ವೇದವನ್ನು ಬೋಧಿಸಿದ ಸರ್ವಜ್ಞ, ಕಲ್ಲಿನಲ್ಲಿ ಕಲೆಯನ್ನು ಸೃಷ್ಟಿಸಿದ ಜಕ್ಕಣಾಚಾರ್ಯರು, ಕುರಿತೋದಯೇ ಕಾವ್ಯವನ್ನು ರಚಿಸಿದ ಜಾನಪದರು ಮೊದಲಾದವರು ಕನ್ನಡ ಕುಲತಿಲಕರು; ಕನ್ನಡಿಗರ ಕಣ್ಮಣಿಗಳು ನಾಡಿನ ಭಾಗ್ಯವಿಧಾತರು ಪ್ರಾಥಃಸ್ಮರಣೀಯರು.

ಕರ್ನಾಟಕ ಸರ್ವಧರ್ಮಸಹಿಷ್ಣುತೆಯ ಆಡುಂಬೋಲವಾಗಿತ್ತು. ಅದ್ವೈತ ಸಿದ್ಧಾಂತ ಪ್ರತಿಪಾದಕರಾದ ಶಂಕರಾಚಾರ್ಯರ, ದ್ವೈತ ಸಿದ್ಧಾಂತ ಬೋಧಕರಾದ ಮಧ್ವಾ ಚಾರ್ಯರ, ವಿಶಿಷ್ಟಾದ್ವೈತ ಸಿದ್ಧಾಂತ ಪ್ರಚಾರಕರಾದ ರಾಮಾನುಜಾಚಾರ್ಯರು ಶಕ್ತಿವಿಶಿಷ್ಠಾದ್ವೈತ ಸಿದ್ಧಾಂತದ ವೀರಶೈವ ಪ್ರತಿಪಾದಕರಾದ ರೇಣುಕಾದಿ ಆಚಾರ್ಯರು ಮತ್ತು ಬಸವಾದಿ ಪ್ರಮಥರ ಕರ್ಮಭೂಮಿ ಕರ್ನಾಟಕ. ಅಪಾರವಾದ ಅಮೂಲ್ಯ ನೈಸರ್ಗಿಕ ಸಂಪತ್ತು, ಕರಾವಳಿ, ಖನಿಜ ಭಂಡಾರವನ್ನು ಪಡೆದ ಕರ್ನಾಟಕವು ಭಾರತದ ವಿಶಿಷ್ಟ ರಾಜ್ಯವಾಗಿತ್ತು. ಇಲ್ಲಿ ಆಗಿಹೋಗಿರುವಷ್ಟು ದಾರ್ಶನಿಕರು, ಕವಿಗಳು, ಕಲಾವಿದರು, ಕಲಿಗಳು, ಸಾಧುಸಂತರು ವೈಣಿಕ ಶ್ರೇಷ್ಠರು, ವಿಜ್ಞಾನಿಗಳು ಹಾಗೂ ತತ್ವಜ್ಞಾನಿಗಳು ಬೇರೆ ರಾಜ್ಯಗಳಲ್ಲಿ ಇಲ್ಲವೆಂದು ಹೇಳಬಹುದು.

ಕಾಲನ ಕ್ರೂರ ಚಕ್ರಕ್ಕೆ ಸಿಲುಕಿ, ವಿಜಯನಗರ ಸಾಮ್ರಾಜ್ಯದ ಪತನದ ನಂತರ ಕರ್ನಾಟಕವು ಹರಿದು ಹಂಚಿಹೋಗಿ, ವಿಭಿನ್ನ ಆಡಳಿತಕ್ಕೊಳಪಟ್ಟಿತು. ಎಲ್ಲಾ ಪ್ರಾಂತಗಳಲ್ಲಿಯೂ ಕನ್ನಡಿಗರು ಅಲ್ಪಸಂಖ್ಯಾತರಾಗಿ, ಅವರ ಸಾಹಿತ್ಯ, ಕಲೆ, ಸಂಸ್ಕೃತಿ, ಕೈಗಾರಿಕೆ, ಮೊದಲಾದವುಗಳ ಬೆಳವಣಿಗೆಗೆ ಕುಂಠಿತಗೊಂಡು ಅವರ ಕೂಗು ಅರಣ್ಯರೋಧನವಾಯಿತ್ತು. ಎಲ್ಲಾ ಕ್ಷೇತ್ರಗಳಲ್ಲಿಯೂ ಕನ್ನಡಿಗರು ಹಿನ್ನಡೆ ಅನುಭವಿಸಿದರು.

ಭಾರತದ ಸ್ವಾತಂತ್ರ್ಯ ಸಂಗ್ರಾಮವು ಏಕೀಕೃತ ಕರ್ನಾಟಕ ಚಳುವಳಿಗೆ ಪ್ರೇರಣೆ ನೀಡಿತು. ವಂಗಭಂಗ ಹೋರಾಟ ಕನ್ನಡಿಗರ ಕಣ್ಣು ತೆರೆಯಿಸಿತು. ಸೈಮನ್ ಕಮೀಷನ್, ಮೋತಿಲಾಲ್ ನೆಹರೂ ಸಮಿತಿ, ತಿಲಕ್, ಗಾಂಧಿ ಮೊದಲಾದ ರಾಷ್ಟ್ರ ನಾಯಕರು ಭಾಷಾವಾರು ಪ್ರಾಂತ ರಚನೆಗೆ ಬೆಂಬಲ ನೀಡಿದರು. ಈ ತತ್ವದ ಆಧಾರದ ಮೇಲೆ ಕಾಂಗ್ರೆಸ್ ಪ್ರಾಂತೀಯ ಸಮಿತಿಗಳ ರಚನೆಯಾಯಿತು. ಕ್ರಿ.ಶ. ೧೯೨೪ರಲ್ಲಿ ಗಾಂಧೀಜಿ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ಜರುಗಿದ





ಕಾಂಗ್ರೆಸ್ ಮಹಾಧಿವೇಶನದಲ್ಲಿ ಸಂಯುಕ್ತ ಕರ್ನಾಟಕ ಹೋರಾಟಕ್ಕೆ ಮನ್ನಣೆ ಸಿಕ್ಕಿತು. ೧೮೯೦ರಲ್ಲಿ ಧಾರವಾಡದಲ್ಲಿ ಸ್ಥಾಪಿಸಲಾದ 'ಕರ್ನಾಟಕ ವಿದ್ಯಾವರ್ಧಕ ಸಂಘವು' ಏಕೀಕರಣ ಚಳುವಳಿಗೆ ನಾಂದಿ ಹಾಡಿತು. ೧೯೧೫ರಲ್ಲಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಿಂದ ಮೈಸೂರು ಸಂಸ್ಥಾನದಲ್ಲಿ ಏಕೀಕರಣದ ದುಂದುಭಿ ಮೊಳಗಲಾರಂಭಿಸಿತು. ೧೯೨೦ರಲ್ಲಿ ಸೇರಿದ ಕರ್ನಾಟಕ ರಾಜಕೀಯ ಪರಿಷತ್ತಿನ ಪ್ರಥಮ ಅಧಿವೇಶನದಲ್ಲಿ ಏಕೀಕೃತ ಕರ್ನಾಟಕ ರಚಿಸಬೇಕೆಂಬ ಗೊತ್ತುವಳಿ ಸರ್ವಾನುಮತದಿಂದ ಪಾಸಾಯಿತು. ೧೯೪೬ರಲ್ಲಿ ಪಂ॥ ಜವಾಹರ್‌ಲಾಲ್ ನೆಹರೂ ಮತ್ತು ಸರ್ದಾರ ಪಟೇಲರು ಅಖಂಡ ಕರ್ನಾಟಕ ರಚಿಸುವ ಆಶ್ವಾಸನೆ ನೀಡಿದರು. ಈ ಹೋರಾಟಾದ ಮುಖಂಡರೆಂದರೆ ಸರ್ವಶ್ರೀ ಅರಟಾಳರು, ರೊದ್ದರು, ಗಿಲಗಂಚಿಯವರು, ಕಡಪಾವರು, ಕಟ್ಟಿ, ಚೆನ್ನಬಸಪ್ಪ, ಹಳಕಟ್ಟಿ, ಆಲೂರು, ಮುದವೀಡು, ಕಂಬಳಿ, ಹೊಸಮನಿ, ಮಂಜಪ್ಪ, ದೇಶಪಾಂಡೆ, ಮೊದಲಾದವರು.

ಭಾರತವು ೧೯೪೭ರ ಆಗಸ್ಟ್ ೧೫ರಂದು ಸ್ವತಂತ್ರವಾಯಿತು. ಉಕ್ಕಿನ ಮನುಷ್ಯ ಸರ್ದಾರ ಪಟೇಲರ ಅವಿಶ್ರಾಂತ ಪರಿಶ್ರಮ ಹಾಗೂ ಮುತ್ಸದ್ಧಿತನದಿಂದ ಸುಮಾರು ೫೦೦ ದೇಶೀಯ ಸಂಸ್ಥಾನಗಳು ಭಾರತದಲ್ಲಿ ವಿಲೀನ ಗೊಂಡರೂ ನಿಜಾಮ್ ಸ್ವತಂತ್ರ್ಯವಾಗಿರಬೇಕೆಂದು ನಿರ್ಧರಿಸಿದ. ಹೈದರಾಬಾದು ವಿಮೋಚನಾ ಆಂದೋಳನವನ್ನು ರಮಾನಂದ ತೀರ್ಥರ ನಾಯಕತ್ವದಲ್ಲಿ ಪ್ರಾರಂಭವಾಯಿತು. ಮೈಸೂರು ಸಂಸ್ಥಾನದ ವಿಲೀನಕ್ಕೂ ಹೋರಾಟ ಮಾಡಿದ್ದು ಉಲ್ಲೇಖನಾರ್ಹವಾಗಿದೆ.

ಹೈದ್ರಾಬಾದು ವಿಮೋಚನಾ ಹೋರಾಟದಲ್ಲಿ ಸಹಸ್ರಾರು ಜನರ ಜೊತೆಗೆ ವಿದ್ಯಾರ್ಥಿಗಳೂ ಭಾಗವಹಿಸಿದರು. ಹೈದರಾಬಾದು ಕರ್ನಾಟಕದ ವಿದ್ಯಾರ್ಥಿಗಳು ಮಹತ್ವದ ಪಾತ್ರ ವಹಿಸಿದರು. ಸರ್ವಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ, ಅನ್ನದಾನಯ್ಯ ಪುರಾಣಿಕ, ಪ್ರಭುರಾಜ, ವಿರೂಪಾಕ್ಷಪ್ಪ, ಸೋಮಪ್ಪ ಮೊದಲಾದವರು ಕಾಲೇಜಿಗೆ ಶರಣು ಹೊಡೆದು ಅಂದಿನ ಧಾರವಾಡ ಜಿಲ್ಲೆಯ ಮುಂಡರಗಿಯಲ್ಲಿ ಸತ್ಯಾಗ್ರಹ ಶಿಬಿರ ಸ್ಥಾಪಿಸಿ ನಿಜಾಂ ಮತ್ತು ರಜಾಕಾರರ ವಿರುದ್ಧ ಹೋರಾಟಕ್ಕೆ ಸಿದ್ಧರಾದರು. ಹಳ್ಳಿಯ ಅನೇಕ ಯುವಕರು ಶಿಬಿರವನ್ನು ಸೇರಿದರು. ಕ್ರಿಯಾಸಮಿತಿಯ ಸಂಚಾಲಕರಾಗಿದ್ದ ಶ್ರೀ ಅನ್ನದಾನಯ್ಯ ಪುರಾಣಿಕ (ಲೇಖಕರು) ಸಿದ್ಧಪಡಿಸಿದ ಕಾರ್ಯಚರಣೆಯ ಯೋಜನೆಯಂತೆ ಶಿಬಿರದ ಯೋಧರು ನಿಜಾಂ ಸರ್ಕಾರದ ವಿರುದ್ಧ ಅನೇಕ ಕಾರ್ಯಾಚರಣೆಗಳನ್ನು ನಡೆಸಿ ನಿಜಾಂ ಪೋಲೀಸರು ಮತ್ತು ರಜಾಕಾರರಿಗೆ ಸಿಂಹಸ್ವಪ್ನ ವಾದರು. ಸರ್ದಾರ ಪಟೇಲರ ಆದೇಶದಂತೆ, ಅನ್ನದಾನಯ್ಯ ಪುರಾಣಿಕರು ನಿಜಾಂ ಪೋಲೀಸರು ಮತ್ತು ರಜಾಕಾರರ ಕಾರ್ಯ ರಾಕ್ಷಸೀ ಕೃತ್ಯಗಳ ಬಗ್ಗೆ ಪ್ರಮುಖ ಪತ್ರಿಕೆಗಳಲ್ಲಿ 'ಅಲ್ಲಮ' ಎಂಬ ಅಂಕಿತದಲ್ಲಿ ಬರೆಯತೊಡಗಿದರು. ಹಳ್ಳಿಗರಿಗೆ ಅಭಯಸಂದೇಶ ಕಳಿಸ ಹತ್ತಿದರು. ಶಿಬಿರದ ಕಾರ್ಯವ್ಯಾಪ್ತಿ ಬೆಳೆಯಿತು. ಶಿಬಿರದ ಪ್ರಮುಖ ನಾಯಕರ ವಿರುದ್ಧ ಅರೆಸ್ಟ್ ವಾರೆಂಟ್ ಹೊರಟಾಗ, ಅನ್ನದಾನಯ್ಯ ಪುರಾಣಿಕರು ಏಕಾಂಗಿಯಾಗಿ ತುಂಗಭದ್ರ ನದಿಯನ್ನು ಈಜಿ, ನೂರಾರು ಸತ್ಯಾಗ್ರಹಿಗಳ ಬಂಧನ ತಪ್ಪಿಸಿದರು. ಸುಮಾರು ೨೬ ಮೈಲಿ ನಡೆದು ತಂಬ್ರಳ್ಳೀಗೆ ಹೋಗಿ ಸತ್ಯಾಗ್ರಹಿಗಳನ್ನು ರಕ್ಷಿಸಿದರು; ಹೊಸಪೇಟೆಯಿಂದ ಗದಗದವರೆಗೆ ಗೂಡ್ಸ್ ಗಾಡಿಯಲ್ಲಿ ಮಿತ್ರರೊಂದಿಗೆ ಸಂಚರಿಸಿ ನಿಜಾಂ ಪೋಲೀಸರ ಮೃತ್ಯು ಪಂಜರದಿಂದ ತಪ್ಪಿಸಿಕೊಂಡರು. ಧಾರವಾಡ, ಬಳ್ಳಾರಿ ಗಡಿ ಭಾಗಗಳಲ್ಲಿ ಶಿವಮೂರ್ತಿಸ್ವಾಮಿಗಳ ನಾಯಕತ್ವದಲ್ಲಿ ಸೊಲ್ಲಾಪುರ ಗಡಿ ಭಾಗದಲ್ಲಿ ಸರದಾರ ಶರಣೇಗೌಡರ ನೇತೃತ್ವದಲ್ಲಿ ,ಬೀದರ ಗಡಿಭಾಗದಲ್ಲಿ ಬಿಡಪ್ಪನವರ ನಾಯಕತ್ವದಲ್ಲಿ ಹೋರಾಟವು ಉಗ್ರ ಸ್ವರೂಪ ತಾಳಿತು. ನಿಜಾಂ ಸೈನಿಕರ ಮತ್ತು ರಜಾಕಾರರ ರಾಕ್ಷಸೀ ಕೃತ್ಯಗಳು ವಿಪರೀತವಾದುವು. ಭಾರತದ ಉಪಪ್ರಧಾನಿ ಸರ್ದಾರ ಪಟೇಲರ ದಿಟ್ಟ ಹಾಗೂ ಸಕಾಲಿಕ ಸೈನಿಕ ಕಾರ್ಯಚರಣೆಯಿಂದ ಹೈದರಾಬಾದು ಸಂಸ್ಥಾನವು ೧೯೪೮ರ ಸೆಪ್ಟೆಂಬರ್ ತಿಂಗಳಲ್ಲಿ ಭಾರತದಲ್ಲಿ ವಿಲೀನವಾಯಿತು. ಆಗ ಹೈದರಾಬಾದು ಸಂಸ್ಥಾನ ವಿಲೀನವಾಗದಿದ್ದರೆ ಅದು ಕಾಶ್ಮೀರ ಸಮಸ್ಯೆಯಂತೆ ಇಂದು ಭದ್ರತಾ ಮಂಡಳಿಯ ಮುಂದೆ ಇರುತ್ತಿತ್ತು. ಹೈದರಾಬಾದು ಕರ್ನಾಟಕ ಪ್ರದೇಶವು ಕರ್ನಾಟಕ ರಾಜ್ಯಕ್ಕೆ ಸೇರುತ್ತಿರಲಿಲ್ಲ. ಈ ಹೋರಾಟದಲ್ಲಿ ಜೀವನದ ಹಂಗು ತೊರೆದು ಹೋರಾಡಿದವರೆಲ್ಲರೂ ಅಭಿನಂದನಾರ್ಹರು. ಶ್ರೀ ಅನ್ನದಾನಯ್ಯ ಪುರಾಣಿಕರು ಹೈದರಾಬಾದಿಗೆ ಹೋಗದೆ ಹುಬ್ಬಳ್ಳಿಯ ಕಾಮರ್ಸ್ ಕಾಲೇಜಿನಲ್ಲಿ ಓದು ಮುಂದುವರೆಸಿದರು. ಹೋರಾಟದಲ್ಲಿ ಅವರ ಎರಡು ವರ್ಷಗಳ ಓದು ಹಾಳಾಯಿತು!.

ಕರ್ನಾಟಕ ಏಕೀಕರಣ ಚಳುವಳಿಯು ಉಗ್ರಸ್ವರೂಪ ತಾಳಿತು. ಧರ್ ಸಮಿತಿ ಮತ್ತು ಜೆ.ವಿ.ಪಿ. ಸಮಿತಿಗಳು ಕರ್ನಾಟಕ ರಾಜ್ಯ ರಚನೆಯನ್ನು ಬೆಂಬಲಿಸಲಿಲ್ಲ. ೧೯೫೩ರಲ್ಲಿ ಆಂಧ್ರಪ್ರದೇಶದೊಂದಿಗೆ ಕರ್ನಾಟಕ ರಾಜ್ಯ ರಚನೆಯಾಗಲಿಲ್ಲ. ಕನ್ನಡಿಗರು ಸಿಡಿದೆದ್ದರು. ವಿದ್ಯಾರ್ಥಿ ಮುಖಂಡರಾಗಿದ್ದ ಅನ್ನದಾನಯ್ಯ ಪುರಾಣಿಕರು 'ಏಕೀಕರಣ ದಿನ' ಆಚರಿಸಬೇಕೆಂದು ವಿದ್ಯಾರ್ಥಿಗಳಿಗೆ ಹುಬ್ಬಳ್ಳಿಯಲ್ಲಿ ಕರೆ ನೀಡಿದರು. ಹುಬ್ಬಳ್ಳಿಯಲ್ಲಿ ಬೃಹತ್ ಮೆರವಣಿಗೆ ನಡೆಯಿತು. ೧೯೫೩ರ ಏಪ್ರಿಲ್ ೧೯ರಂದು ಹುಬ್ಬಳ್ಳಿಯಲ್ಲಿ ಕೆಪಿಸಿಸಿ ಸಭೆ ಸೇರಿದಾಗ ಗೋಲಿಬಾರಾಯಿತು. ಅಪ್ಪಟ ಗಾಂಧಿ ಭಕ್ತರಾಗಿದ್ದ ಪುರಾಣಿಕರನ್ನು ದಸ್ತಗಿರಿ ಮಾಡಲಾಯಿತು. ಸೆರೆಮನೆಯಲ್ಲಿ ಶ್ರೀ ಅನ್ನದಾನಯ್ಯ ಪುರಾಣಿಕರು ಅಖಂಡ ಉಪವಾಸ ಪ್ರಾರಂಭಿಸಿದರು. ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಅಖಿಲ ಕರ್ನಾಟಕ ವಿದ್ಯಾರ್ಥಿ ಪರಿಷತ್ತು ಸ್ಥಾಪಿಸಬೇಕೆಂದು ಪುರಾಣಿಕರು ಶಪಥ ಮಾಡಿದರು. ೧೯೫೪ರಲ್ಲಿ ಪುರಾಣಿಕರು ಹೈದರಾಬಾದಿಗೆ ಹೋಗಿ ಅಲ್ಲಿಯ ಸರ್ಕಾರಿ

ಲಾ ಕಾಲೇಜ್ ಸೇರಿದರು. ಸ್ನೇಹಿತರ ಸಹಾಯ ಸಹಕಾರದಿಂದ ೧೯೫೪ನೇ ಫೆಬ್ರವರಿ ೭ನೆಯ ತಾರೀಖು ಹೈದರಾಬಾದಿನ ನಿಜಾಂ ಕಾಲೇಜಿನಲ್ಲಿ ಅಖಿಲ ಕರ್ನಾಟಕ ವಿದ್ಯಾರ್ಥಿ ಪರಿಷತ್ತಿನ ಪ್ರಥಮ ಅಧಿವೇಶನ ಸೇರಿಸಿದರು. ಕರ್ನಾಟಕದ ಎಲ್ಲಾ ಪ್ರದೇಶಗಳ ವಿದ್ಯಾರ್ಥಿ ಪ್ರತಿನಿಧಿಗಳು ಸಮ್ಮೇಳನದಲ್ಲಿ ಭಾಗವಹಿಸಿದರು. ಅದು ಕರ್ನಾಟಕ ವಿದ್ಯಾರ್ಥಿಗಳ ಪ್ರಥಮ ಸಮಾಗಮವಾಗಿತ್ತು. ಅನ್ನದಾನಯ್ಯ ಪುರಾಣಿಕ ಪರಿಷತ್ತಿನ ಅಧ್ಯಕ್ಷರಾಗಿ ಸರ್ವಾನು ಮತದಿಂದ ಆಯ್ಕೆಗೊಂಡರು. ಪುರಾಣಿಕರು ಕನ್ನಡನಾಡಿನಲ್ಲಿ ಸಂಚರಿಸಿ ಕರ್ನಾಟಕ ಏಕೀಕರಣ ಹೋರಾಟದಲ್ಲಿ ವಿದ್ಯಾರ್ಥಿಗಳು ಭಾಗವಹಿಸುವಂತೆ ಪ್ರಯತ್ನಿಸಿದರು. ಪುರಾಣಿಕರ ಕೊಡುಗೆಯನ್ನು ನಾಯಕರಾದ ಶ್ರೀ ಎಸ್. ನಿಜಲಿಂಗಪ್ಪ ಮೊದಲಾದವರು ಮುಕ್ತಕಂಠದಿಂದ ಪ್ರಶಂಸಿದರು.

ಕನ್ನಡಿಗರ ಒತ್ತಾಯಕ್ಕೆ ಮಣಿದು ಕೇಂದ್ರ ಸರ್ಕಾರವು ೧೯೫೩ರಲ್ಲಿ ಫಜಲ್ ಆಲಿ ಆಯೋಗವನ್ನು ರಚಿಸಿತು. ಈ ಆಯೋಗವು ಏಕೀಕೃತ ಕರ್ನಾಟಕ ರಚಿಸಬೇಕೆಂದು ವರದಿಯನ್ನು ೧೯೫೫ರಲ್ಲಿ ಸಲ್ಲಿಸಿತು. ಭಾಷಾವಾರು ಪ್ರಾಂತ ರಚನೆ ರಾಜ್ಯ ಪುನರ್ವಿಂಗಡನೆ ಕಾಯಿದೆ ಪಾಸಾಗಿ ೧೯೫೬ನೆಯ ನವೆಂಬರ್ ೧ನೇ ತಾರೀಖು ವಿಶಾಲ ಮೈಸೂರು ರಾಜ್ಯ ರಚನೆಯಾಯಿತು. ಕನ್ನಡಿಗರ ಬಹುದಿನಗಳ ಕನಸು ನನಸಾಯಿತು. ಕರ್ನಾಟಕ ಶಿಲ್ಪಿ ಶ್ರೀ ಎಸ್. ನಿಜಲಿಂಗಪ್ಪ ನವರ ಸರ್ಕಾರ ಅಧಿಕಾರ ವಹಿಸಿಕೊಂಡಿತು. ನಂತರ ಅದು ಕರ್ನಾಟಕವೆಂಬ ಹೆಸರು ಪಡೆಯಿತು. ಮುಂದೆ ಮಹಾಜನ ಆಯೋಗ ರಚನೆ ಆಯ್ತು. ಗಡಿಗಳ ವಿವಾದ ಇತ್ಯರ್ಥಕ್ಕಾಗಿ, ಏಕೀಕರಣ ಹೋರಾಟದಲ್ಲಿ ಸಹಸ್ರಾರು ಕನ್ನಡಿಗರು ಭಾಗವಹಿಸಿದರು. ಅವೆರಲ್ಲರೂ ಪ್ರಶಂಸಾರ್ಹರು. ವಂದನೀಯರು. ಇದು ಕರ್ನಾಟಕ ಏಕೀಕರಣ ಹೋರಾಟದ ಪಕ್ಷಿ ನೋಟ– ಸಂಕ್ಷಿಪ್ತ ವರದಿ!

ಕರ್ನಾಟಕ ರಾಜ್ಯೋದಯ ಸುವಣ ಮಹೋತ್ಸವವನ್ನು ಆಚರಿಸಲಾಗುತ್ತಿದೆ. ಒಂದು ಪ್ರಶ್ನೆ ಉದ್ಭವಿಸುತ್ತದೆ. ಏಕೀಕರಣ ಹೋರಾಟಗಾರರ ಕನಸು ನನಸಾಗಿದೆಯೇ? 'ಇಲ್ಲ'ವೆಂದು ಹೇಳಬಹುದು. ಶ್ರೀ ವಿಶ್ವೇಶ್ವರಯ್ಯ, ಶ್ರೀ ಮಿರ್ಜಾ ಇಸ್ಮಾಯಿಲ್, ಕೆಂಗಲ್ ಹನುಮಂತಯ್ಯ, ಶ್ರೀ ಎಸ್. ನಿಜಲಿಂಗಪ್ಪನವರಂತಹ ಪ್ರಾಮಾಣಿಕ, ಪರಿಣಿತ, ಪ್ರತಿಭಾ ಸಂಪನ್ನ ಮುಖ್ಯಮಂತ್ರಿ ಮುಂದೆ ಬರಲೇ ಇಲ್ಲ. ಕೆಲವರನ್ನು ಹೊರತು ಪಡಿಸಿ ಸ್ವಾರ್ಥಿಗಳು, ಅವಕಾಶವಾದಿಗಳು, ವ್ಯಕ್ತಿತ್ವಹೀನರು, ಅಸಮರ್ಥರು, ಅನನುಭವಿಗಳು, ಅಪ್ರಾಮಾಣಿಕರು ರಾಜ್ಯಸೂತ್ರಗಳನ್ನು ವಹಿಸಿಕೊಂಡು ಕರ್ನಾಟಕದ ಅವನತಿಗೆ ಕಾರಣರಾದರು. ಶಿಷ್ಟರು ಸಮರ್ಥರು, ಪ್ರಾಮಾಣಿಕರು, ಪ್ರತಿಭಾ ಸಂಪನ್ನರು, ಪರಿಣಿತರು, ಸೇವಾಕಾಂಕ್ಷಿಗಳು ರಾಜ್ಯದ ಆಡಳಿತ ಸೂತ್ರಗಳನ್ನು ವಹಿಸಿಕೊಳ್ಳುವ ತನಕ ಕರ್ನಾಟಕ ರಾಜ್ಯದ ಸರ್ವತೋಮುಖ ಬೆಳವಣಿಗೆಗೆ ಸಾಧ್ಯವಿಲ್ಲ. ಆ ಸುಸಮಯ ಬೇಗ ಬರಲೆಂದು ಹೃದಯಾರೆ ಹಾರೈಸುವೆ. □

## ಶ್ರದ್ಧಾಂಜಲಿ



ಡಾ॥ ಸ.ಜ. ನಾಗಲೋಟಿಮಠ

ಅಂತರಾಷ್ಟ್ರೀಯ ಖ್ಯಾತಿವೆತ್ತ ವೈದ್ಯಶ್ರೇಷ್ಠರಾದ ಡಾ॥ ಸ.ಜ. ನಾಗಲೋಟಿಮಠ ಅವರು ದಿನಾಂಕ ೨೪-೧೦-೨೦೦೬ ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ ಅತೀವ ದುಃಖ ವ್ಯಕ್ತಪಡಿಸಿದೆ. ಇಷ್ಟು ಬೇಗ ಅವರು ಶಿವನ ಪಾದ ಸೇರುತ್ತಾರೆಂದು ಆಶಿಸಿರಲಿಲ್ಲ. ಅವರೊಬ್ಬ ಶ್ರೇಷ್ಠ ಮಟ್ಟದ ವೈದ್ಯ ಭಾಸ್ಕರರಾಗಿದ್ದರು. ಸರಳತೆಗೆ ಹೆಸರಾಗಿದ್ದರೂ ಶ್ರದ್ಧೆ, ನಿಷ್ಠೆ, ಕರ್ತವ್ಯಪ್ರಜ್ಞೆಗಳ ಪ್ರತೀಕವಾಗಿದ್ದರು. 'ಸ್ವಾಭಿಮಾನದ ಶರಣನು ಯಾರಿಗೂ ಅಂಜ' ಎಂಬ ಬಸವಣ್ಣನವರ ಅಮೃತ ವಾಣಿಯ ಆರಾಧಕರಾಗಿದ್ದರು. ರಾಜ್ಯ ವಿಜ್ಞಾನ ಪರಿಷತ್ತಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ವಚನಗಳಲ್ಲಿ ಆರೋಗ್ಯ ವಿಜ್ಞಾನವನ್ನು ಶೋಧಿಸಿದವರಾಗಿದ್ದರು. ಸದಾಕಾಲ ಅಣೆಯ ಮೇಲೆ ವಿಭೂತಿಯನ್ನು ಧರಿಸುವ ಭಸ್ಮ ನಿಷ್ಠೆ ಅವರದಾಗಿತ್ತು. ಶ್ರೀಮಠದೊಡನೆ ಅವರು ಬೆಳೆಸಿಕೊಂಡು ಬಂದಿದ್ದ ಅನನ್ಯವಾದ ಭಕ್ತಿ, ಪ್ರೇಮಗಳು ಸ್ಮರಣೀಯವಾಗಿವೆ. ಅವರ ಅಗಲಿಕೆ ವೈದ್ಯಕೀಯ ಕ್ಷೇತ್ರಕ್ಕೆ ಸಮಾಜಕ್ಕೆ ವಿಜ್ಞಾನ ಪರಿಷತ್ತಿಗೆ ಎಲ್ಲಕ್ಕಿಂತಲೂ ಹೆಚ್ಚಾಗಿ ಕರ್ನಾಟಕ ರಾಜ್ಯಕ್ಕೆ ತುಂಬಲಾರದ ನಷ್ಟವಾಗಿದೆ. ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ, ಅಭಿಮಾನಿಗಳಿಗೆ ದಯಾಮಯ ನಾದ ಪರಶಿವನು ನೀಡಲೆಂದು ಕೋರುತ್ತಾ ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿ ಯನ್ನು ನೀಡಲೆಂದು 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನು ಸಮರ್ಪಿಸಿದೆ.





# ಭಾಷೆ ಮತ್ತು ಮಾಧ್ಯಮ

–ಡಾ॥ ಮಹಾಬಲೇಶ್ವರ ರಾವ್, ಪ್ರಾಚಾರ್ಯರು, ಡಾ॥ ಟಿ.ಎಂ.ಎ. ಪೈ ಕಾಲೇಜು, ಉಡುಪಿ– ೫೭೬ ೧೦೨.

ಶಿಕ್ಷಣದಲ್ಲಿ ಭಾಷೆ ಮತ್ತು ಮಾಧ್ಯಮದ ವಿಷಯ ಚರ್ಚೆಗೆ ಬಂದಾಗ ತಕರಾರುಗಳು, ಜಗಳಗಳು, ಪುಕಾರುಗಳು, ವಾದ ವಿವಾದಗಳು ಹುಟ್ಟಿಕೊಳ್ಳುತ್ತವೆ. ವಿದ್ಯಾರ್ಥಿಗಳು ಶಾಲಾ ಹಂತದಲ್ಲಿ ಎಷ್ಟು ಭಾಷೆಗಳನ್ನು ಕಲಿಯಬೇಕು? ಹೇಗೆ ಕಲಿಯಬೇಕು? ದ್ವಿತೀಯ ಭಾಷೆಯ ಕಲಿಕೆಯನ್ನು ಬೇಗನೆ ಆರಂಭಮಾಡಿದರೆ ಸಾಧಕ–ಬಾಧಕಗಳೇನು? ಶಿಕ್ಷಣ ಮಾಧ್ಯಮದ ಭಾಷೆ ಯಾವುದಿರಬೇಕು? ಮತ್ತು ಏಕೆ? ಬದಲಾದ ಸಾಮಾಜಿಕ ಸಂದರ್ಭದಲ್ಲಿ, ವಿವಿಧ ಸಾಮಾಜಿಕ, ಆರ್ಥಿಕ ಗುಂಪುಗಳ ಒತ್ತಡಗಳಿಗೆ ಬಲಿಯಾಗಿ ಶಿಕ್ಷಣದಲ್ಲಿ ಭಾಷಾನೀತಿಯನ್ನು ಬದಲಿಸಬೇಕೆ? ನಮ್ಮ ಶಿಕ್ಷಣದ ಭಾಷಾ ನೀತಿ ಏನು? ಅಂಥ ನೀತಿ ಇದೆಯೆ? ಇದ್ದರೆ ಅದು ಎಷ್ಟು ಪುರೋಗಾಮಿಯಾಗಿದೆ? ಇವೆಲ್ಲ ಪ್ರಶ್ನೆಗಳು ಹುಟ್ಟಿಕೊಂಡು ದೊಡ್ಡ ಭಾಷಾ ವಿವಾದಗಳಿಗೆ ಹೇತುವಾಗುತ್ತವೆ.

'ಭಾಷೆ ಎಂಬ ಬೆಳಕು ಇಲ್ಲದಿರುತ್ತಿದ್ದರೆ ಈ ಜಗತ್ತು ಅಂಧಕಾರದಲ್ಲಿ ಮುಳುಗುತ್ತಿತ್ತು' ಎಂಬ ಸೊಗಸಾದ ಮಾತನ್ನು ಕಾವ್ಯಮೀಮಾಂಸಕ 'ದಂಡಿ' ಹೇಳಿದ್ದಾನೆ. ಭಾಷೆಯೇ ಬೆಳಕು. ಈ ನುಡಿ ಬೆಳಕು ಅಂತರಂಗದ ಕತ್ತಲನ್ನು ಚದುರಿಸುತ್ತದೆ. ಅಂತರಂಗ ಬಹಿರಂಗಗೊಳ್ಳುವಂತೆ ಮಾಡುತ್ತದೆ. ಮಾತು, ಬರೆಹ ಹಾಗೂ ಚಿಂತನ ಶಕ್ತಿ ಇಲ್ಲವಾಗಿದ್ದರೆ ನಾವು ಪ್ರಾಣಿ ಸದೃಶ ಬದುಕು ಬದುಕಬೇಕಾಗಿರುತ್ತಿತ್ತು. ಆದರೆ ಭಾಷೆಯ ಬೆಳಕು ಮಾನವನ ಬಾಳನ್ನು ಬೆಳಗಿದೆ.

ಭಾಷೆ ಮಾನವ ಸಹಜ ಜೈವಿಕ ವ್ಯವಹಾರ. ಭಾಷೆ ಮಾನವನ ಪಾಲಿಗೆ ದತ್ತವಾಗಿದೆ. ಭಾಷೆಯ ಕಲಿಕೆಗೆ ಮತ್ತು ಗಳಿಕೆಗೆ ಅವಶ್ಯಕವಾದ ಸಾಮರ್ಥ್ಯಗಳು ಮಾನವನಲ್ಲಿ ಜನ್ಮಜಾತವಾಗಿವೆ. ಜನ್ಮಜಾತವಾದ ಈ ಸಾಮರ್ಥ್ಯದ ಬೆಳವಣಿಗೆಗೆ ಸೂಕ್ತ ಪರಿಸರ, ಅಭಿಪ್ರೇರಣೆ, ಉದ್ದೇಶ ಪ್ರಾಪ್ತವಾದಾಗ ಭಾಷೆಯ ಕಲಿಕೆ ಸುಗಮವಾಗುತ್ತದೆ.

'ಭಾಷೆ ಅತ್ಯಂತ ಸೃಷ್ಟಿಶೀಲವಾದ ಮಾನವ ಕ್ರಿಯೆಗಳಲ್ಲೊಂದು. ಭಾಷೆ ಅನಂತ ಸಾಧ್ಯತೆಗಳ ಸಾಂತ ಸಾಧನ' ಎಂದು ಖ್ಯಾತ ಭಾಷಾವಿಜ್ಞಾನಿ 'ನೋಮ್ ಚೋಮ್‌ಸ್ಕಿ' ಅಭಿಪ್ರಾಯಪಡುತ್ತಾರೆ. ಮಾನವನ ಬುದ್ಧಿಶಕ್ತಿಯ ವಿಶಿಷ್ಟಾಂಶವಾದ ಭಾಷೆಯನ್ನು ಅರ್ಜಿಸಲು, ಕಲಿಯಲು ಅಗತ್ಯವಾದ ಸಾಧನ ಮಾನವನ ಮೆದುಳಿನಲ್ಲಿದೆ. ಬುದ್ಧಿಯ ವ್ಯಕ್ತಾಂಶವೇ ಭಾಷೆ. ಭಾಷೆಯ ಅವ್ಯಕ್ತಾಂಶ ಬುದ್ಧಿ. ಭಾಷೆ–ಚಿಂತನ ಹಾಗೂ ಅನುಭವಗಳ ನಡುವೆ ಹೊಕ್ಕುಳಬಳ್ಳಿಯ ಸಂಬಂಧವಿದೆ. ಚಿಂತನ ಭಾಷೆಯ ರೂಪದಲ್ಲಿ ಹೊರ ಹೊಮ್ಮುತ್ತದೆ. ಭಾಷೆ ಚಿಂತನವಾಗಿ ಹರಟುಗಟ್ಟುತ್ತದೆ. ಭಾಷೆ ಹಾಗೂ ಚಿಂತನಕ್ಕೆ ಅನುಭವ ಮೂಲದ್ರವ್ಯವಾಗುತ್ತದೆ. ಹೀಗಾಗಿ ಅನುಭವದ ಹೊರತು ಭಾಷೆಯಿಲ್ಲ. ಭಾಷೆಯ ಹೊರತು ಅನುಭವವಿಲ್ಲ ಎಂಬ ಜನಜನಿತವಾಗಿದೆ. ಅನುಭವ ಭಾಷೆಯ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. ಭಾಷೆ ಅನುಭವವಾಗಿ ಮೈದಳೆಯುತ್ತದೆ.

ಭಾಷೆ ಪ್ರಧಾನವಾಗಿ ವ್ಯಕ್ತಿತ್ವದ ಅಭಿವ್ಯಕ್ತಿಯ ಸಾಧನ. ಲಿಖಿತ, ಮುದ್ರಿತ, ಮೌಖಿಕ–ಭಾಷೆಯ ರೂಪ ಯಾವುದೇ ಇರಲಿ, ಅದು ಇರುವುದೇ ನಮ್ಮ ಭಾವನೆ, ಕನಸು, ವಿಚಾರ, ಅಭಿಪ್ರಾಯ, ತಳಮಳ ಇತ್ಯಾದಿಗಳನ್ನು ತೋಡಿಕೊಳ್ಳುವುದಕ್ಕೆ, ಹಂಚಿಕೊಳ್ಳುವುದಕ್ಕೆ, ಅದು ಅನುಭವಗಳ ವಿನಿಮಯದ ಸಾಧನ. ಮೈಕೆಲ್ ಹ್ಯಾಲಿಡೇ ಎಂಬ ತಜ್ಞರು (೧೯೭೩) ಸಾಧನಾಕಾರ್ಯ, ನಿಯಂತ್ರಕ ಕಾರ್ಯ, ಪಾರಸ್ಪರಿಕ ಕಾರ್ಯ, ಪ್ರಾತಿನಿಧ್ಯ ಕಾಯಕ, ವೈಯಕ್ತಿಕ ಕಾರ್ಯ, ಅನ್ವೇಷಣ ಕಾರ್ಯ ಹಾಗೂ ಕಲ್ಪನಾತ್ಮಕ ಕಾರ್ಯವೆಂದು ಭಾಷೆಯ ಏಳು ಕಾರ್ಯಗಳನ್ನು ಪಟ್ಟಿ ಮಾಡುತ್ತಾರೆ. ಅಂದರೆ ವಿವಿಧ ಬಗೆಗಳಲ್ಲಿ ನಾವು ಭಾಷೆಯನ್ನು ಬಳಸುತ್ತೇವೆ. ಕವಿ ಕುವೆಂಪು ಅವರು ಇದನ್ನೇ ಸಮೀಕರಿಸಿ ಹೇಳಿದ ಹಾಗೆ ಲೋಕೋಪಯೋಗಿ ಶಾಸ್ತ್ರೋಪಯೋಗಿ ಹಾಗೂ ಬಹೂಪಯೋಗಿ ಎಂಬ ಮೂರು ಮುಖಗಳಲ್ಲಿ ಭಾಷೆಯ ಮೂಲಕ ನಾವು ಅಭಿವ್ಯಕ್ತಿ ಕ್ರಿಯೆಯಲ್ಲಿ ತೊಡಗುತ್ತೇವೆ. ಭಾಷೆಯಿಲ್ಲದೆ ಅಭಿವ್ಯಕ್ತಿಯಿಲ್ಲ, ಅಭಿವ್ಯಕ್ತಿ ಶೂನ್ಯವಾದ ಭಾಷೆ ಭಾಷೆಯೇ ಅಲ್ಲ ಎನ್ನಬಹುದು.

ನಿತ್ಯ ವ್ಯವಹಾರದಲ್ಲಿ ಭಾಷೆಗಳ ಕಲಿಕೆ ಮತ್ತು ಅಭಿವ್ಯಕ್ತಿ ಮಾಧ್ಯಮಕ್ಕೆ ಸಂಬಂಧಿಸಿದಂತೆ ಸಾಮಾನ್ಯವಾಗಿ ಜಗಳಗಳಿಲ್ಲ. ನಮ್ಮ ನಮ್ಮ ಅಗತ್ಯಗಳು, ಉದ್ದೇಶಗಳು ಹಾಗೂ ವ್ಯವಹಾರಗಳಿಗೆ ಸಂಬಂಧಿಸಿದಂತೆ ನಮ್ಮ ಇಚ್ಛೆಯಂತೆ ನಾವು ಭಾಷೆಗಳನ್ನು ಅರ್ಜಿಸುತ್ತೇವೆ ಅಥವಾ ಕಲಿಯುತ್ತೇವೆ. ತಾಯ್ನುಡಿ ಅಥವಾ ಮನೆಯ ಮಾತು ಅಥವಾ ನಿಕಟ ಪರಿಸರದ ಭಾಷೆಯನ್ನು ನಾವೆಲ್ಲ ಎಳವೆಯಿಂದಲೇ ಅರ್ಜಿಸುತ್ತೇವೆ. ಈ ನುಡಿ ನಮ್ಮ ಅನುಭವ ವೈವಿಧ್ಯಕ್ಕೆ ತಕ್ಕಂತೆ ನಮ್ಮೊಡನೆ ಬಲಿಯುತ್ತದೆ. ತೀರ ಅಗತ್ಯ ಅಥವಾ ಅನಿವಾರ್ಯ ಅನ್ನಿಸಿದಾಗ ಇತರ ಭಾಷೆಗಳನ್ನು ಕೇಳಿ ಕಲಿಯಲು ಪ್ರಯತ್ನಿಸುತ್ತೇವೆ. ಈ ಭಾಷೆಗಳಲ್ಲಿ ವಿದ್ವಾಂಸರಂತೆ ಪ್ರಾವೀಣ್ಯ ಗಳಿಸದಿದ್ದರೂ ನಿತ್ಯ ವ್ಯವಹಾರಕ್ಕೆ ತಕ್ಕಷ್ಟು ಪರಿಣಿತಿ ಸಂಪಾದಿಸುತ್ತೇವೆ. ಮನೆಯಲ್ಲೇ ಮೂರು ನಾಲ್ಕು ಭಾಷೆಗಳನ್ನು ನುಡಿಯುವ ಸಂದರ್ಭಗಳಿದ್ದರೆ ಅವನ್ನು ಕಲಿಯುತ್ತೇವೆ. ಎಷ್ಟು ಬೇಕೋ ಅಷ್ಟು ಭಾಷೆಗಳನ್ನು ಕಲಿಯುವ ಸಾಮರ್ಥ್ಯ ನಮ್ಮಲ್ಲಿದೆ. ಆದರೆ ಅದಕ್ಕೆ ತಕ್ಕ ಬುದ್ಧಿಶಕ್ತಿ, ಭಾಷಿಕ ಬುದ್ಧಿಶಕ್ತಿ ಅಥವಾ ಅಭಿಕ್ಷಮತೆ, ಭಾಷಿಕ ಪರಿಸರ ಅಭಿಪ್ರೇರಣೆ ಬೇಕು. ಅನ್ಯಭಾಷಿಕ ಪರಿಸರದ ಜೊತೆ ಸಹಜೀವನ ನಡೆಸುತ್ತಿದ್ದರೂ ಅನ್ಯ ಭಾಷೆಯ ಅವನ್ನು

ಕಲಿಕೆ ನಮಗೆ ಅಗತ್ಯವಿಲ್ಲ ಎಂದಾದರೆ ನಾವು ಅದನ್ನು ಕಲಿಯಲು ಮನಸ್ಸು ಮಾಡುವುದಿಲ್ಲ. ಇಲ್ಲಿ ಆಕ್ಷೇಪ, ಜಗಳ, ವಾದ ವಿವಾದದ ಪ್ರಶ್ನೆಯಿಲ್ಲ.

ಶಿಕ್ಷಣದಲ್ಲಿ ಭಾಷೆ ಮತ್ತು ಮಾಧ್ಯಮದ ವಿಷಯ ಚರ್ಚಗೆ ಬಂದಾಗ ತಕರಾರುಗಳು, ಜಗಳಗಳು, ಪುಕಾರುಗಳು, ವಾದ ವಿವಾದಗಳು ಹುಟ್ಟಿಕೊಳ್ಳುತ್ತವೆ. ವಿದ್ಯಾರ್ಥಿಗಳು ಶಾಲಾ ಹಂತ ದಲ್ಲಿ ಎಷ್ಟು ಭಾಷೆಗಳನ್ನು ಕಲಿಯಬೇಕು? ಏಕೆ ಕಲಿಯಬೇಕು? ಹೇಗೆ ಕಲಿಯಬೇಕು? ದ್ವಿತೀಯ ಭಾಷೆಯ ಕಲಿಕೆಯನ್ನು ಬೇಗನೆ ಆರಂಭ ಮಾಡಿದರೆ ಸಾಧಕ-ಬಾಧಕಗಳೇನು? ಶಿಕ್ಷಣ ಮಾಧ್ಯಮದ ಭಾಷೆ ಯಾವುದಿರಬೇಕು? ಮತ್ತು ಏಕೆ? ಬದಲಾದ ಸಾಮಾಜಿಕ ಸಂದರ್ಭದಲ್ಲಿ, ವಿವಿಧ ಸಾಮಾಜಿಕ, ಆರ್ಥಿಕ ಗುಂಪುಗಳ ಒತ್ತಡಗಳಿಗೆ ಬಲಿಯಾಗಿ ಶಿಕ್ಷಣದಲ್ಲಿ ಭಾಷಾನೀತಿಯನ್ನು ಬದಲಿಸಬೇಕೆ? ನಮ್ಮ ಶಿಕ್ಷಣದ ಭಾಷಾ ನೀತಿ ಏನು? ಅಂಥ ನೀತಿ ಇದೆಯೇ? ಇದ್ದರೆ ಅದು ಎಷ್ಟು ಪುರೋಗಾಮಿಯಾಗಿದೆ? ಇವೆಲ್ಲ ಪ್ರಶ್ನೆಗಳು ಹುಟ್ಟಿಕೊಂಡು ದೊಡ್ಡ ಭಾಷಾ ವಿವಾದಗಳಿಗೆ ಹೇತುವಾಗುತ್ತವೆ.

ಭಾರತದಂಥ ಬಹುಭಾಷಿಕ ಸಂದರ್ಭದಲ್ಲಿ ಈ ವಿವಾದ ಕಳೆದ ೧೭೦ ವರ್ಷಗಳಿಂದಲೂ ಇದೆ. ಇತ್ತೀಚೆಗಂತೂ ಕರ್ನಾಟಕದ ಸಂದರ್ಭದಲ್ಲಿ ಅದು ಶೈಕ್ಷಣಿಕ ವಿವೇಕದ ಹಳಿ ತಪ್ಪಿದೆ.

ದುರ್ದೈವದ ಸಂಗತಿ ಎಂದರೆ ಭಾಷೆಯ ಕಲಿಕೆಗೂ ಭಾಷೆ ಬಗೆಗಿನ ಕಲಿಕೆಗೂ ಹಾಗೂ ಭಾಷಾ ಮಾಧ್ಯಮದ ಮೂಲಕವಾದ ಕಲಿಕೆಗೂ ಇರುವ ವ್ಯತ್ಯಾಸ ಅನೇಕರಿಗೆ ತಿಳಿದೇ ಇಲ್ಲ. ಇಂಗ್ಲೀಷ್ ಮಾಧ್ಯಮದ ಬಗೆಗೆ ವಿರೋಧವೆಂದರೆ ಇಂಗ್ಲೀಷ್‌ಗೆ ವಿರೋಧವೆಂದು ತಪ್ಪಾಗಿ ತಿಳಿಯುತ್ತಾರೆ. ತೀರ ಕೆಳಗಿನ ಹಂತಗಳಲ್ಲಿ ಇಂಗ್ಲೀಷನ್ನು ಎರಡನೆಯ ಭಾಷೆಯಾಗಿ ಕಲಿಯುವುದಕ್ಕೆ ವಿರೋಧ ಎಂದರೆ ಪ್ರಗತಿ ವಿರೊಧಿಗಳು ಎಂದು ಹಣೆಪಟ್ಟಿ ಹಚ್ಚಲಾಗುತ್ತದೆ. ಕನ್ನಡದ ಪರವಾಗಿ ಮಾತನಾಡಿದರೆ ಭಾವುಕರು, ಸಂಪ್ರದಾಯ ವಾದಿಗಳು ಎಂದು ಮೂಗು ಮುರಿಯಲಾಗುತ್ತದೆ. ಕನ್ನಡ ಕಲಿಕೆ ಕಡ್ಡಾಯ ಎಂದರೆ ಕನ್ನಡ ಮಾಧ್ಯಮ ಕಡ್ಡಾಯ ಎಂದು ತಪ್ಪಾಗಿ ಭಾವಿಸಲಾಗುತ್ತದೆ.

ಶಾಲಾ ಹಂತದಲ್ಲಿ ಕಲಿಯುವವರಿಗೆ ವಿಷಯಜ್ಞಾನ, ಭಾಷಾಜ್ಞಾನ ಹಾಗೂ ಪರಿಣಿತಿ- ಇವುಗಳಲ್ಲಿ ಯಾವುದಾದರೊಂದು ಅಗತ್ಯವಾಗಿ ಇರಲೇಬೇಕು. ವಿಷಯ ಜ್ಞಾನವಿದ್ದರೆ ಭಾಷೆ ಗೊತ್ತಿಲ್ಲದಿದ್ದರೆ ಹೇಗೋ ಸರಿದೂಗಿಸಿಕೊಂಡು ಹೋಗಬಹುದು ಮತ್ತು ಕಾಲಕ್ರಮೇಣ ಭಾಷೆಯನ್ನು ಕಲಿಯುತ್ತ ಸುಧಾರಿಸಿಕೊಳ್ಳಬಹುದು. ವಿಷಯಜ್ಞಾನ ಇಲ್ಲದೆ ಭಾಷಾ ಜ್ಞಾನವಿದ್ದರೆ ಶ್ರದ್ಧಾಪೂರ್ವಕವಾಗಿ ಅಧ್ಯಯನ ಮುಖೇನ ಜ್ಞಾನ ಸಂಪಾದಿಸಬಹುದು. ಇವೆರಡರ ಕೊರತೆಯಿಂದ ಕಲಿಕೆ ಹೊರೆಯಾಗುತ್ತದೆ. ಪ್ರಾಥಮಿಕ ಹಾಗೂ ಪ್ರಾಥಮಿಕ ಪೂರ್ವ ಹಂತದಲ್ಲಿ ಆಂಗ್ಲಮಾಧ್ಯಮ ಶಿಕ್ಷಣವನ್ನು ವಿರೋಧಿಸುವುದು ಈ ಕಾರಣಕ್ಕಾಗಿ, ಇಲ್ಲಿ ಭಾಷೆ ಪರಕೀಯ ಅಥವಾ ಅಪರಿಚಿತ; ನಿತ್ಯ ವ್ಯವಹಾರದ್ದಲ್ಲ. ಅದು ಮನೆಯ ಮಾತಲ್ಲ. ತರಗತಿಯ ನಾಲ್ಕು ಗೋಡೆಗಳ ನಡುವೆ ಕಿವಿಗೆ ಬೀಳುವಂಥದ್ದು. ಭಾಷೆಯ ಕಲಿಕೆಯ ಪರಿಸರ ಸಹಜವಲ್ಲ. ಶಿಕ್ಷಕರ ಭಾಷಿಕ ಜ್ಞಾನ ಸಾಮರ್ಥ್ಯ ಮತ್ತು ಅಭಿವ್ಯಕ್ತಿ ಶಕ್ತಿ ನಿರಾಶಾದಾಯಕ. ಕೃತ್ರಿಮ ಪರಿಸರ, ಅಪರಿಚಿತ ಭಾಷೆ, ಅದಕ್ಷ, ಅಸಮರ್ಥ ಮತ್ತು ದೋಷಪೂರಿತ ಬೋಧನೆಯ ಮೂಲಕ ಒದಗುವ ಮಾಹಿತಿಯ ಜ್ಞಾನ ಕೂಡ ಅಪರಿಚಿತ ಮತ್ತು ದೋಷಪೂರ್ಣ ಕಲಿಕೆಯೂ ಅಪರಿಪೂರ್ಣ ಎಂಬುದನ್ನು ಗಮನಿಸಬೇಕು. ವಿದ್ಯಾರ್ಥಿಗಳಿಗೆ ಯಾವ ಮಾಧ್ಯಮದಲ್ಲಿ ಬೋಧನೆ ಮಾಡಬೇಕು? ಎಂಬ ಜಿಜ್ಞಾಸೆ ಮುಗಿದುಹೋದ ಅಧ್ಯಾಯವಾದರೂ ಮತ್ತೆ ಮತ್ತೆ ಹಳೆಯ ಗಾಯಗಳನ್ನು ಕೆದಕಿ ಸಂತೋಷಪಡುವುದು ಖೇದಕರ ವಿಚಾರ.

ಶಿಕ್ಷಣದಲ್ಲಿ ಮಾಧ್ಯಮದ ಪ್ರಶ್ನೆ ಮುಖ್ಯವಾದುದು ಮತ್ತು ಮೂಲಭೂತವಾದುದು. ಇದು ಒಂದು ನಿರ್ದಿಷ್ಟ ಭಾಷೆಯ ಮೂಲಕವೇ ಸಕಲ ಜ್ಞಾನಸಂಪತ್ತನ್ನು ಗಳಿಸಬೇಕಾದ ಮತ್ತು ಅಭಿವ್ಯಕ್ತಿಸಬೇಕಾದ ವ್ಯವಹಾರ. ಶೈಕ್ಷಣಿಕವಾಗಿ ಸ್ವೀಕೃತವಾದ ವಿಚಾರವೆಂದರೆ ತಾಯ್ನುಡಿ ಅಥವಾ ಮಗುವಿನ ಪರಿಸರದ ಭಾಷೆಯೇ ಶಿಕ್ಷಣ ಮಾಧ್ಯಮಕ್ಕೆ ಸೂಕ್ತ. ಇದೇ ಮಗುವಿನ ಸಹಜ ಚಿಂತನೆಯ, ಕಲ್ಪನೆ, ಕನಸುಗಳ ಅಭಿವ್ಯಕ್ತಿಯ ಭಾಷೆ. ಎಲ್ಲ ಶೈಕ್ಷಣಿಕ ವರದಿಗಳು, ವಿದ್ವಾಂಸರು ಶಾಲಾ ಹಂತದಲ್ಲಿ ತಾಯ್ನುಡಿ ಅಥವಾ ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಮತ್ತೆ ಮತ್ತೆ ಎತ್ತಿಹಿಡಿದಿದ್ದಾರೆ. ಕರ್ನಾಟಕದ ಮಟ್ಟಿಗೆ ಸ್ವಾತಂತ್ರ್ಯಪೂರ್ವದಿಂದಲೂ ಶಾಲೆಗಳಲ್ಲಿ ಕನ್ನದ ಮಾಧ್ಯಮ ಬಳಕೆಯಲ್ಲಿತ್ತು. ೪೫ ವರ್ಷಗಳ ಹಿಂದೆಯೇ ಪ್ರೌಢಶಾಲಾ ಹಂತದಲ್ಲಿ ಕನ್ನಡ ಮಾಧ್ಯಮವನ್ನು ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿ ಶ್ರೀ ಎನ್.ಎಸ್. ಸುಬ್ಬರಾವ್ ಜಾರಿಗೆ ತಂದರು. ಕುವೆಂಪು ಅವರು ಇನ್ನೂ ನಾಲ್ಕು ಹೆಜ್ಜೆ ಮುಂದೆ ಹೋಗಿ ಉನ್ನತ ಶಿಕ್ಷಣ ಹಂತದಲ್ಲಿ ಕನ್ನಡ ಮಾಧ್ಯದಲ್ಲಿ ಬೋಧನೆಗೆ ನೆರವಾಗಲೆಂದು ಮೈಸೂರು ವಿಶ್ವದ್ಯಾಲಯದ ಪ್ರಸಾರಾಂಗದ ಮೂಲಕ ನೂರಾರು ಕನ್ನಡ ಗ್ರಂಥಗಳನ್ನು ವಿದ್ವಾಂಸರಿಂದ ಬರೆಯಿಸಿ, ಭಾಷಾಂತರ ಮಾಡಿಸಿ ಪ್ರಕಟಿಸಿದರು. ಆದರೆ ನಾವಿಂದು ಹೊಸ ಕಾಲದ ಸವಾಲುಗಳ ನೆಪದಲ್ಲಿ ಬೆಳೆದುಬಂದ ಈ ಆರೋಗ್ಯಕರ ಪರಂಪರೆಯನ್ನೇ ಧಿಕ್ಕರಿಸಿ ನಿಂತಿದ್ದೇವೆ.

ಹಿರಿಯ ಪ್ರಾಥಮಿಕ ಹಾಗೂ ಪ್ರೌಢಹಂತದಲ್ಲಿ ತ್ರಿಭಾಷಾ ಸೂತ್ರ ಜಾರಿಗೆ ಬಂದು ನಾಲ್ಕು ದಶಕಗಳೇ ಕಳೆದಿವೆ. ತ್ರಿಭಾಷಾ ಸೂತ್ರ, ಇಡೀ ರಾಷ್ಟ್ರದಲ್ಲಿ ಹೇಗೆ ಜಾರಿಗೆ ಬಂದಿದೆ ಎಂಬುದನ್ನಾಗಲಿ ಅದರ ಔಚಿತ್ಯವನ್ನಾಗಲಿ ನಾನಿಲ್ಲಿ ಪ್ರಶ್ನಿಸುವುದಿಲ್ಲ. ಆದರೆ ಈ ಸೂತ್ರದ ದೆಸೆಯಿಂದಾಗಿ ಅನೇಕ ವಿದ್ಯಾರ್ಥಿಗಳು ಸಂಸ್ಕೃತ ಅಥವಾ ಹಿಂದಿ ಭಾಷೆಯ ಕಲಿಕೆಯಿಂದ ವಂಚಿತರಾಗುತ್ತಾರೆ. ಈ ಭಾಷೆಗಳನ್ನು ಕಲಿಯಬೇಕೆಂಬ ಹಂಬಲವುಳ್ಳವರಿಗೆ ಶಾಲಾ ವ್ಯವಸ್ಥೆಯಲ್ಲಿ





ಹೆಚ್ಚುವರಿಗಾಗಿ ಬೋಧಿಸುವ ಸಾಂಸ್ಥಿಕ ವ್ಯವಸ್ಥೆ ನಮ್ಮಲ್ಲಿಲ್ಲ. ಅಂತೆಯೇ ಕೋರ್ ಪೇಪರ್ಸ್ ಹೆಸರಿನಲ್ಲಿ ವಿಜ್ಞಾನ, ಸಮಾಜ ಅಧ್ಯಯನ ಹಾಗೂ ಗಣಿತ ಅಧ್ಯಯನ ಕಡ್ಡಾಯ ವಾಗಿದೆ. ಇವುಗಳಲ್ಲಿ ಆಸಕ್ತಿ ಮತ್ತು ಪರಿಣತಿ ಇಲ್ಲದ ವಿದ್ಯಾರ್ಥಿಗಳಿಗೆ ಇದೊಂದು ಹೊರಲಾರದ ಹೊರೆ. ಭಾಷೆಗಳ ಕಲಿಕೆಯಲ್ಲಿ ವಿಶೇಷ ಆಸಕ್ತಿ ಮತ್ತು ಅಭಿಕ್ಷಮತೆ ಉಳ್ಳ ಮಕ್ಕಳಿಗೆ ವಿಜ್ಞಾನ, ಗಣಿತ ಇತ್ಯಾದಿ ವಿಷಯಗಳ ಬದಲಿಗೆ ಎರಡೋ ಮೂರೋ ಭಾಷೆಗಳನ್ನು ಹೆಚ್ಚುವರಿಯಾಗಿ ಕಲಿಯುವ ಅಥವಾ ಉನ್ನತ ಹಂತದ ಭಾಷಾಧ್ಯಯನ ಮಾಡುವ ಅವಕಾಶಗಳೂ ಇಲ್ಲ. ಒಟ್ಟಿನಲ್ಲಿ ವಿಷಯಗಳ ಆಯ್ಕೆ, ಅಧ್ಯಯನದಲ್ಲಿ ಶಾಲಾ ಹಂತದಲ್ಲಿ ಆಯ್ಕೆಗಳೇ ಇಲ್ಲದ ಸ್ಥಿತಿಯಲ್ಲಿ ನಾವಿದ್ದೇವೆ. ರಾಷ್ಟ್ರಮಟ್ಟದ ಪಠ್ಯಕ್ರಮಗಳೂ ಈ ಅಂಶವನ್ನು ಮನಗಾಣದಿರುವುದು ಶೋಚನೀಯ. ಸಬಲೀಕರಣ, ಸ್ವಾಯತ್ತತೆ, ವಿಕೇಂದ್ರೀಕರಣದ ಘೋಷಣೆಗಳು ಮೊಳಗುತ್ತಿವೆಯೇ ಹೊರತು ಆಚರಣೆಯಲ್ಲಿ ಕಂಡು ಬರುತ್ತಿಲ್ಲ. ಈಗ ಒಂದನೆಯ ತರಗತಿಯಿಂದ ಇಂಗ್ಲೀಷ್ ಕಲಿಕೆಯ ಮೂಲಕ ಕನ್ನಡವನ್ನು ಉಳಿಸಲು ಕಂಕಣಬದ್ಧರಾಗಿದ್ದೇವೆ! ದ್ವಿಭಾಷಿಕತೆ ಹಾಗೂ ದ್ವಿತೀಯ ಭಾಷಾ ಕಲಿಕೆಯ ಸಿದ್ಧಾಂತ, ಭೋಧನಾ ವಿಧಾನ ಇತ್ಯಾದಿಗಳ ಸ್ಪಷ್ಟ ಕಲ್ಪನೆಯಿಲ್ಲದೆ ಕೇವಲ ಸಾಮಾಜಿಕ ಒತ್ತಡಗಳನ್ನು ಪರಿಗಣಿಸಿ ಯಾವ ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳದೆ ತರಾತುರಿಯಿಂದ ಚಕ್ರಸುಳಿಗಳುಳ್ಳ ಮಡುವಿಗೆ ಹಾರಲು ತುದಿಗಾಲಲ್ಲಿದ್ದೇವೆ!

ದ್ವಿತೀಯ ಭಾಷೆಯ ಕಲಿಕೆಗೆ ಸಂಬಂಧಿಸಿದ ಕೆಲವು ವಿವಾರಗಳನ್ನು ಸೂತ್ರ ರೂಪದಲ್ಲಿ ಹೀಗೆ ಹಿಡಿದಿಡಬಹುದು:

1. ಪ್ರಥಮ ಭಾಷೆ ಮತ್ತು ಆ ಭಾಷೆಯ ಸಂಸ್ಕೃತಿ ಪ್ರಬಲವಾಗಿದ್ದರೆ ದ್ವಿತೀಯ ಭಾಷೆ ಅದರ ಜೊತೆ ಸೇರಿಕೊಳ್ಳುತ್ತದೆ. ಪ್ರಥಮ ಭಾಷೆ ಹಾಗೂ ಅದರ ಸಂಸ್ಕೃತಿ ದುರ್ಬಲವಾಗಿದ್ದರೆ ದ್ವಿತೀಯ ಭಾಷಾ ಜ್ಞಾನ ಪ್ರಬಲವಾಗಿ ಪ್ರಥಮ ಭಾಷೆ ಕ್ರಮೇಣ ವ್ಯಕ್ತಿಯ ವ್ಯವಹಾರದಲ್ಲಿ ಮೂಲೆಗುಂಪಾಗುತ್ತದೆ.
2. ಪ್ರಥಮ ಭಾಷಾ ಶಿಕ್ಷಣ ಉತ್ತಮವಾಗಿದ್ದರೆ ಅದು ದ್ವಿತೀಯ ಭಾಷಾ ಕಲಿಕೆಗೆ ನೀರೆರೆದು ಪೋಷಿಸುತ್ತದೆ.
3. ದ್ವಿತೀಯ ಭಾಷಾ ಕಲಿಕೆ-ಬೋಧನೆಯು ಭಾಷಾ ವಿಜ್ಞಾನ, ನರ ಭಾಷಾ ವಿಜ್ಞಾನ, ಸಮಾಜ ಭಾಷಾ ವಿಜ್ಞಾನ, ಸಾಮಾಜಿಕ ಹಾಗೂ ಜ್ಞಾನ ಮನೋವಿಜ್ಞಾನ ಕ್ಷೇತ್ರಗಳನ್ನು ವಿಶೇಷವಾಗಿ ಅವಲಂಭಿಸಿದೆ.
4. ದ್ವಿತೀಯ ಭಾಷಾ ಗಳಿಕೆ ಅಥವಾ ಕಲಿಕೆಯು ವಿದ್ಯಾರ್ಥಿಯ ವಿಕಾಸದ ವಿವಿಧ ಹಂತಗಳನ್ನು ಸಾಮಾಜಿಕ ಪಾರಸ್ಪರಿಕ ಕ್ರಿಯೆ ಹಾಗು ಜ್ಞಾನ ಗ್ರಹಿಕೆಯ ಶಕ್ತಿಯನ್ನು ಅವಲಂಬಿಸಿದೆ.
5. ಭಾಷಾ ಗಳಿಕೆಯ ಶಿಖರಕಾಲ ಎರಡರಿಂದ ಆರು ವರ್ಷ ಪ್ರಾಯ ಎಂದರೂ ಕೂಡ ದ್ವಿತೀಯ ಭಾಷಾ ಕಲಿಕೆಗೆ ಅತ್ಯಂತ ಸೂಕ್ಷ್ಮವೂ ಪ್ರಶಸ್ತವೂ ಆದ ಕಾಲ ಎಂಬುದಿಲ್ಲ.
6. ದ್ವಿತೀಯ ಭಾಷಾ ಕಲಿಕೆಯಲ್ಲಿ ಕಲಿಯುವವರು ಮಾಡುವ ದೋಷಗಳಿಗೆ ಪ್ರಥಮ ಭಾಷಾ ಸನ್ನಿವೇಶದಿಂದ ದ್ವಿತೀಯ ಭಾಷಾ ಸನ್ನಿವೇಶಕ್ಕೆ ಆಗುವ ಕಲಿಕೆಯ ನೇತ್ಯಾತ್ಮಕ ವರ್ಗಾವಣೆ ಮತ್ತು ವಿಕಾಸದ ಹಂತಗಳಲ್ಲಿನ ನ್ಯೂನತೆಗಳೇ ಕಾರಣ.

ಕರ್ನಾಟಕದಲ್ಲಿ ರಾಜ್ಯ ಭಾಷೆಯೂ ಪ್ರಾದೇಶಿಕ ಭಾಷೆಯೂ ವ್ಯಾವಹಾರಿಕ ಭಾಷೆಯೂ ಆಡಳಿಯ ಭಾಷೆಯೂ ಆದ ಕನ್ನಡವನ್ನು ಎಲ್ಲ ಮಕ್ಕಳು ಒಂದನೆಯ ತರಗತಿಯಿಂದಲೇ ಕಡ್ಡಾಯವಾಗಿ ಕಲಿಯಬೇಕು ಎಂದು ಒತ್ತಾಯಿಸದೆ ಇಂಗ್ಲೀಷನ್ನು ಕಡ್ಡಾಯವಾಗಿ ಕಲಿಸಬೇಕು ಎಂದು ವಾದ ಮಾಡುತ್ತಿರುವವರು ದ್ವಿತೀಯ ಭಾಷಾ ಕಲಿಕೆ-ಬೋಧನೆಗೆ ಸಂಬಂಧಿಸಿದಂತೆ ಈಗ ಉಲ್ಲೇಖಿಸಿದ ವಿಚಾರಗಳನ್ನು ಪರಿಶೀಲಿಸಿದ್ದಾರೆಯೇ?

ನಾವಿಂದು ನಮ್ಮನ್ನು ಆಳುವ ಸರಕಾರವನ್ನು ಕೇಳಬೇಕಾಗಿದೆ: ಪ್ರಾಥಮಿಕ ಹಂತದಿಂದ ಮೊದಲ್ಗೊಂಡು ಸ್ನಾತಕೋತ್ತರ ಶಿಕ್ಷಣ ಹಂತದವರೆಗೆ ಶಿಕ್ಷಣ ಮಾಧ್ಯಮದ ವಿಷಯದಲ್ಲಿ ಸರಕಾರದ ಅಧಿಕೃತ ಭಾಷಾ ನೀತಿ ಏನು? ಈ ನೀತಿಯ ಅನುಷ್ಠಾನ ಕ್ರಮ ಹೇಗೆ? ಕನ್ನಡದ ಸರ್ವಾಂಗೀಣ ವಿಕಾಸಕ್ಕೆ ಸಂಬಂಧಿಸಿದಂತೆ ಸರಕಾರದ ಮುಂದೆ ಏನು ನೀಲನಕ್ಷೆ ಇದೆ? ಅದು ಎಷ್ಟು ವರ್ಷಗಳಲ್ಲಿ ವ್ಯವಸ್ಥಿತವಾಗಿ ಯೋಜನಾಬದ್ಧವಾಗಿ ಜಾರಿಗೆ ಬರುತ್ತದೆ? ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಉನ್ನತ ಶಿಕ್ಷಣ ಮತ್ತು ಸಂಶೋಧನೆಯವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿಯಬೇಕೆಂದು ಬಯಸುವ ವಿದ್ಯಾರ್ಥಿಗಳಿಗೆ ಸರಕಾರ ಯಾವ ಬಗೆಯಲ್ಲಿ ಪ್ರೋತ್ಸಾಹ ನೀಡುತ್ತದೆ? ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಸರಕಾರಿ, ಖಾಸಗಿ ಹಾಗೂ ಐಟಿ-ಬಿಟಿ ಸಾಮ್ರಾಜ್ಯದಲ್ಲಿ ಏನು ಉದ್ಯೋಗಾವಕಾಶಗಳನ್ನು ಕಲ್ಪಿಸಲಿದೆ? ಜಾಗತೀಕರಣ, ಉದಾರೀಕರಣ, ವಾಣಿಜ್ಯೀಕರಣದ ಈ ದಿನಗಳಲ್ಲಿ ಕನ್ನಡದ ಅಂತಃಸತ್ವವನ್ನು ಕರ್ನಾಟಕ ಸರಕಾರ ಹೇಗೆ ಕಾಪಾಡುತ್ತದೆ? ಎಂದು ಕನ್ನಡದ ಜನತೆ ಪ್ರಶ್ನಿಸಬೇಕಾಗಿದೆ. ನಮ್ಮ ನಮ್ಮ ನೆಲೆಗಳಲ್ಲಿ ಕನ್ನಡವನ್ನು ಬೆಳೆಸುವ ನಿಟ್ಟಿನಲ್ಲಿ ನಾವು ಏನು ಮಾಡಬಹುದೆಂದು ಅಂತರವಲೋಕನ ಮಾಡಿಕೊಳ್ಳುವ ಮತ್ತು ಕನ್ನಡದ ವಿಕಾಸಕ್ಕಾಗಿ ನಮ್ಮದೇ ಆದ ಕಿರುಹೆಜ್ಜೆಗಳನ್ನಿಡುವ ಪ್ರಾಮಾಣಿಕ ಪ್ರಯತ್ನಗಳನ್ನು ನಾವಿಂದು ಮಾಡಬೇಕಾಗಿದೆ.

☆

## ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ಅಭಿನಂದನೆ

ಸಮನ್ವಯ ಕವಿ, ವಿಮರ್ಶಕರಾಗಿ, ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ನಮ್ಮೆಲ್ಲರ ಪ್ರೀತಿಯ ಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ರಾಷ್ಟ್ರಕವಿ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದಕ್ಕೆ 'ಸಿದ್ಧಗಂಗಾ' ಹರ್ಷಿಸುತ್ತದೆ. ಡಾ॥ ಜಿ.ಎಸ್.ಎಸ್. ಶ್ರೀಮಠದ ಹಳೆಯ ವಿದ್ಯಾರ್ಥಿ ಎಂಬುದು ನಮ್ಮೆಲ್ಲರಿಗೂ ಅಭಿಮಾನವನ್ನುಂಟು ಮಾಡಿದೆ.

ಎಂಭತ್ತು ವಸಂತಗಳ ಬೇವು ಬೆಲ್ಲವನ್ನು ಸವಿದಿರುವ ಡಾ॥ ಜಿ.ಎಸ್.ಎಸ್. ಶಿವರುದ್ರಪ್ಪನವರು ಹುಟ್ಟಿದ ದಿನಾಂಕ ೭-೨-೧೯೨೬. ಹಡೆದ ಪುಣ್ಯ ಜೀವಿಗಳು ತಂದೆ ಶಾಂತವೀರಪ್ಪ ತಾಯಿ ವೀರಮ್ಮ. ಹುಟ್ಟಿದ ಸ್ಥಳ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ರಾಷ್ಟ್ರಕವಿ, ನಿಸರ್ಗ ಕವಿ ಕುವೆಂಪುರವರ ಶಿಷ್ಯರಾಗಿ, ಕನ್ನಡ ಸ್ನಾತಕೋತ್ತರ ಪದವಿಯನ್ನು ಪಡೆದು ೧೯೬೫ರಲ್ಲಿ 'ಸೌಂದರ್ಯ ಸಮೀಕ್ಷೆ' ಮಹಾ ಪ್ರಬಂಧ ಬರೆದು ಡಾಕ್ಟರೇಟ್ ಪದವಿ ಪಡೆದರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ, ನಿರ್ದೇಶಕರಾಗಿ ಸೇವೆ ಸಲ್ಲಿಸಿ ೧೯೮೬ ರಲ್ಲಿ ನಿವೃತ್ತರಾದರು.

ಇವರ 'ಮಸ್ಕೋದಲ್ಲಿ ೨೨ ದಿನ' ಕೃತಿಗೆ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿ, 'ಕಾವ್ಯಾರ್ಥ ಚಿಂತನ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರಗಳೂ ಸೇರಿದಂತೆ ಹಲವಾರು ಪ್ರಶಸ್ತಿ ಗೌರವಗಳು ದೊರಕಿದೆ. ರಾಜ್ಯ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಸಲ್ಲಿಸಿದ ಸೇವೆ ಹಚ್ಚ ಹಸಿರು. ೧೯೯೨ರಲ್ಲಿ ದಾವಣಗೆರೆಯಲ್ಲಿ ನಡೆದ ೬೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕನ್ನಡ ತಾಯಿ ಭುವನೇಶ್ವರಿಯ ತೇರನ್ನು ಎಳೆದ ಹೆಗ್ಗಳಿಕೆ ಇವರದು.

**ಡಾ॥ ಜಿ.ಎಸ್. ಶಿವರುದ್ರಪ್ಪ**

ಸಾಮಗಾನ, ಚೆಲುವು ಒಲವು, ತೀರ್ಥವಾಣಿ, ಕಾರ್ತೀಕ, ಅನಾವರಣ, ತೆರೆದ ದಾರಿ, ನನ್ನ ನಿನ್ನ ನಡುವೆ, ದೀಪದ ಹೆಜ್ಜೆ, ದೇವಶಿಲ್ಪಿ ಗೋಡೆ ಮುಂತಾದ ಕವನ ಸಂಕಲನಗಳು ವಿಮರ್ಶೆಯ ಪೂರ್ವಪಶ್ಚಿಮ, ಸೌಂದರ್ಯ ಸಮೀಕ್ಷೆ, ಕಾವ್ಯಾರ್ಥ ಚಿಂತನ್ ಪರಿಶೀಲನ, ಅನುರಣವ, ನವೋದಯ, ಪ್ರತಿಕ್ರಿಯೆ, ಗತಿಬಿಂಬ, ಬೆಡಗು ಗಂಗೆಯ ಶಿಖರಗಳಲ್ಲಿ ಕನ್ನಡ ನಾಡಿನ ಸಮೀಕ್ಷೆ, ಮಹಾಕಾವ್ಯದ ಸ್ವರೂಪ, ಕನ್ನಡ ಕವಿಗಳ ಕಾವ್ಯ ಕಲ್ಪನೆ, ಅಮೇರಿಕಾ ದಲ್ಲಿ ಕನ್ನಡಿಗ ಮೊದಲಾದ ಮೌಲಿಕ ಕೃತಿಗಳನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿ ಶ್ರೀಮಂತಗೊಳಿಸಿದ್ದಾರೆ.

ಶ್ರೀಮಠದ ಹಳೆಯ ವಿದ್ಯಾರ್ಥಿಯಾದ ಡಾ॥ ಜಿ.ಎಸ್. ಶಿವರುದ್ರಪ್ಪನವರು ಶ್ರೀಮಠದ ಬಗ್ಗೆ, ಪರಮಪೂಜ್ಯ ಶ್ರೀಶ್ರೀಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನು ಹೊಂದಿದ್ದಾರೆ. ರಾಷ್ಟ್ರಕವಿ ಪ್ರಶಸ್ತಿ ದೊರೆತ ನಂತರ ಶ್ರೀಮಠಕ್ಕೆ ಕುಟುಂಬ ಸಮೇತರಾಗಿ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಶ್ರೀಗಳವರ ದಿವ್ಯಾಶೀರ್ವಾದವನ್ನು ಪಡೆದುದನ್ನು ಈ ಸಂದರ್ಭದಲ್ಲಿ ಸ್ಮರಿಸಲು ಸಂತೋಷವಾಗುತ್ತದೆ. ಡಾ॥ ಜಿ.ಎಸ್. ಶಿವರುದ್ರಪ್ಪನವರು ಪರಮಪೂಜ್ಯರ ಕುರಿತು ಬರೆದ ಕವನ ಅವರು ಶ್ರೀ ಶ್ರೀಗಳವರಿಗೆ ಸಲ್ಲಿಸಿದ ಭಕ್ತಿ ಕುಸುಮವಾಗಿದೆ.

ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ದಯಾಮಯನಾದ ಸಿದ್ಧಲಿಂಗೇಶ್ವರನು ಆಯುರಾರೋಗ್ಯ ಕರುಣಿಸಿ ಅವರಿಂದ ಮತ್ತಷ್ಟು ಮೌಲಿಕ ಗ್ರಂಥಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ದೊರೆಯುವಂತಾಗಲಿ ಎಂದು 'ಸಿದ್ಧಗಂಗಾ' ಹೃದಯ ತುಂಬಿ ಹಾರೈಸುತ್ತದೆ.





## ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ವೀರಶೈವರ ಪಾತ್ರ

– ಟಿ.ಹೆಚ್.ಎಂ. ಬಸವರಾಜ, ಕ.ಸಾ.ಪ. ರಾಜ್ಯ ಉಪಸಂಚಾಲಕರು, ಸಾ.ಸ. ಸಮಿತಿ, ೩೬/೨೫, ವಿದ್ಯಾಗಿರಿ, ಬಳ್ಳಾರಿ.

೧೯೫೬ಕ್ಕೆ ಮೊದಲು ಭಾರತ ಭೂಪಟದಲ್ಲಿ ಕರ್ನಾಟಕ ಹೆಸರಿನ ರಾಜ್ಯವೇ ಇರಲಿಲ್ಲ. ಮಾಯವಾಗಿದ್ದ ಅದು ಮೂಡಿ ಬರಲು ನಡೆಸಿದ ಹೋರಾಟ, ಅದರ ಹಿಂದಿರುವ ಸೋಲು–ಗೆಲುವುಗಳ ಕಥೆ–ವ್ಯಥೆ ಈ ಕೃತಿಯ ವಸ್ತು. ಕರ್ನಾಟಕ ಏಕೀಕರಣದ ಹೋರಾಟದಲ್ಲಿ ಹೋಲಿದು ಅಖಂಡವಾಗಿ ಮಾಡುವ ಒಂದು ದುಸ್ಸಾಹಸಕ್ಕೆ ಕೈ ಹಾಕಿದವರರಲ್ಲಿ ವೀರಶೈವರ ಪಾತ್ರ ಬಹು ಮುಖ್ಯವಾಗಿತ್ತು. ಕೆ.ಪಿ.ಸಿ.ಸಿ.ಯ ರಚನೆಯಾದ ನಂತರ ಕರ್ನಾಟಕ ಮಟ್ಟದ ರಾಜಕೀಯ ಸಮ್ಮೇಳನಗಳನ್ನು ನಡೆಸಲಾಯಿತು. ೧೯೨೨ರಲ್ಲಿ ಮಂಗಳೂರಿನಲ್ಲಿ, ೧೯೨೪ರಲ್ಲಿ ಗೋಕರ್ಣದಲ್ಲಿ, ೧೯೨೪ರಲ್ಲಿ ಬೆಳಗಾವಿಯಲ್ಲಿ ಪ್ರಥಮ ಏಕೀಕರಣ ಚಳುವಳಿ, ೧೯೨೬ರಲ್ಲಿ ೪ನೇ ಕರ್ನಾಟಕ ಏಕೀಕರಣ ಚಳುವಳು ನಡೆಯಿತು. ಹಳಕಟ್ಟಿಯವರ ಅಧ್ಯಕ್ಷತೆ ಯಲ್ಲಿ ಜರುಗಿದ ಈ ಚಳುವಳಿ ಜನಜಾಗೃತಿಗೆ ಹಾದಿ ಮಾಡಿದವು.

ಬಳ್ಳಾರಿಯಲ್ಲಿ ೧೯೩೫ರಲ್ಲಿ ಸರ್ವದರ್ಶನ ತೀರ್ಥ ವೈ. ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಏಕೀಕರಣ ಚಳುವಳಿ ಪ್ರಾರಂಭವಾದಾಗ ನ್ಯಾಯಾಧೀಶ ಟಿ.ಹೆಚ್.ಎಂ. ಸದಾಶಿವಯ್ಯನವರು, ಕೋರಿ ಸೂಗೂರಪ್ಪ ಟಿ.ಹೆಚ್.ಎಂ. ಶಿವಯ್ಯ ಆಗಿನ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ರಾವ್ ಬಹದ್ದೂರ್ ವೈ. ಮಹಾಬಲೇಶ್ವರಪ್ಪನವರು ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದ್ದರು. ಗಮಕಿಗಳಾದ ಡಾ॥ ಜೋಳದ ರಾಶಿ ದೊಡ್ಡನಗೌಡರು, ದಾವಣಗೆರೆಯ ಪ್ರೇಮದ ಬಳ್ಳಿಯ ಬಳಗದ ಮಲ್ಲಾಬಾದಿ ವೀರಭದ್ರಪ್ಪನವರು, ಬಿ.ಎಂ. ಶ್ರೀಕಂಠಯ್ಯನವರು, ಪ್ರೊಫೆಸರ್, ಸೆಂಟ್ರಲ್ ಕಾಲೇಜ್, ಬೆಂಗಳೂರು ೧೯೩೬ರಲ್ಲಿ ಚಳುವಳಿಯಲ್ಲಿ ಭಾಗವಹಿಸಿದರು. ಶ್ರೀಕಂಠಯ್ಯನವರ ಅಧ್ಯಕ್ಷತೆ ಯಲ್ಲಿ ಬಳ್ಳಾರಿಯ ವೀರಶೈವ ಶಾಲೆಯಲ್ಲಿ ೧೫.೧೦.೧೯೩೬ರಂದು ಚಳುವಳಿಯ ರೂಪು ರೇಷೆಗಳು ತಯಾರಾದವು. ಎಸ್.ಎಂ. ಸಿಂಧಿಗಿ, ಬಿ.ಎಂ. ರೇವಣಸಿದ್ದಯ್ಯ ಮೇಟಿ ದೊಡ್ಡಪ್ಪ, ಎಸ್.ಗವಿಸಿದ್ದಪ್ಪ ಹೆಚ್. ಬಸವನಗೌಡ, ಶಿವಚನ್ನಬಸವಸ್ವಾಮಿ ಇವರೆಲ್ಲರೂ ಭಾಗವಹಿಸಿದ್ದರು.

೨೩.೧೦.೧೯೩೬ನೇ ಶುಕ್ರವಾರ ಬಿಜಾಪುರದ ಬೃಹನ್ಮಾಠಾಧ್ಯ ಕ್ಷರಾದ ವಿದ್ಯಾಲಂಕಾರ ಶಂಭುಲಿಂಗ ಶಿವಾಚಾರ್ಯ ಸ್ವಾಮಿಗಳು ಅಧ್ಯಕ್ಷತೆ ವಹಿಸಿ ಮಾತನಾಡಿದರು. ಬಳ್ಳಾರಿಂಯು ಕರ್ನಾಟಕ ಸಂಘದ ಕಾರ್ಯದರ್ಶಿಯಾದ ಟಿ.ಹೆಚ್.ಎಂ. ಶಿವಯ್ಯನವರು ಕಾರ್ಯಕ್ರಮ ಸಂಯೋಜಿಸಿದರು. ೨೨.೧೨.೧೯೩೬ರಲ್ಲಿ ಹೊಸಪೇಟೆಯಲ್ಲಿ ಜಮಖಂಡಿಯ ಚಳುವಳಿಗೆ ಹೋಗಲು ಪ್ರತಿನಿಧಿಗಳಾಗಿ ಬೆಲ್ಲದ ಚೆನ್ನಪ್ಪ, ಗುಗ್ಗರಿ ದೊಡ್ಡಪ್ಪ, ಇವರನ್ನು ಆರಿಸಲಾಯಿತು. ೧೯೩೬ರಲ್ಲಿ ಧಾರವಾಡದ ರಚನಾ ಪಿತಾಮಹ ರಾವ್‌ಬಹದ್ದೂರ್ ಫಕ್ಕೀರಪ್ಪ ಗುರುಬಸಪ್ಪ ಹಳಕಟ್ಟಿಯವರು ಬಳ್ಳಾರಿಯಲ್ಲಿ ೧೯೨೬ನೇ ಮೇ ೨೨, ೨೩, ೨೪ರಂದು ಕನ್ನಡ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಚಳುವಳಿಗೆ ನಾಂದಿ ಹಾಡಿದರು. ಹಡಗಲಿ ತಾಲ್ಲೂಕಿನ ಮಾಗಳ ಗ್ರಾಮದ ವ್ಯಾಕರಣ ತೀರ್ಥ ವೈ. ಚಂದ್ರ ಶೇಖರ ಶಾಸ್ತ್ರಿಗಳು ಧಾರವಾಡದಲ್ಲಿ ನಡೆದ ೨೫ನೇ ಕನ್ನಡ ಸಮ್ಮೇಳನದಲ್ಲಿ ಡಿಸೆಂಬರ್೨೭, ಜನವರಿ ೧, ೧೯೪೧ರಲ್ಲಿ ಕನ್ನಡ ಚಳುವಳಿಯ ಬಗ್ಗೆ ಮಾತನಾಡಿದರು. ೧೯೪೯ರಲ್ಲಿ ಕಲ್ಬುರ್ಗಿಯಲ್ಲಿ ನಡೆದ ಮಾರ್ಚ್ ೫, ೬, ೭ರಂದು ೩೨ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಬಳ್ಳಾರಿ ಜಿಲ್ಲೆಯ ಉತ್ತಂಗಿ ಚನ್ನಪ್ಪನವರು ಅಧ್ಯಕ್ಷ ಸ್ಥಾನದಿಂದ ಕನ್ನಡಿಗರನ್ನು ಎಚ್ಚರಿಸಿದರು.

೧೯೪೭ರಲ್ಲಿ ಆಗಸ್ಟ್ ೧೦ ಮತ್ತು ೧೧ರಂದು ಆದೋನಿಯಲ್ಲಿ ನಡೆದ ಬಳ್ಳಾರಿ ಜಿಲ್ಲಾ ೨ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ವಹಿಸಿ ನ್ಯಾಯಾಧೀಶರೂ ಸಾಹಿತಿಗಳೂ ಆದ ಟಿ.ಹೆಚ್.ಎಂ. ಸದಾಶಿವಯ್ಯನವರು ಏಕೀಕರಣದ ಹೋರಾಟದ ಬಗ್ಗೆ ತಿಳಿಸಿದರು. ೧೯೪೭ರಲ್ಲಿ ಉರುವಕೊಂಡ ದಲ್ಲಿ ಏಕೀಕರಣ ಚಳುವಳಿ ನಡೆಯಿತು. ಅಲ್ಲಿಯ ಗವಿ ಮಠ ಸಂಸ್ಥಾನದ ಪೀಠಾಧಿಪತಿಗಳಾದ ಶ್ರೀ ಕರಿಬಸವ ರಾಜೇಂದ್ರಸ್ವಾಮಿಗಳು ಭಾಷಣ ಮಾಡಿದರು. ಅನಂತಪುರ ಜಿಲ್ಲೆಯ ಗುತ್ತಿ ತಾಲ್ಲೂಕಿನ ಒಂದು ಸಬ್ ತಾಲ್ಲೂಕಾಗಿರುವ ಉರವಕೊಂಡವು ಒಂದು ಕಾಲಕ್ಕೆ ಕರ್ನಾಟಕದ ನಡುನಾಡಾಗಿತ್ತೆಂಬುದನ್ನು ಅಲ್ಲಿನ ಶಾಸನಗಳೆಲ್ಲವೂ ಕನ್ನಡದಲ್ಲೇ ಇರುವುದನ್ನು ತಿಳಿಸಿ, ಆ ಸ್ಥಳದಲ್ಲಿ ಮತ್ತು ಅದರ ಸುತ್ತಮುತ್ತ ಇರುವ ಅನೇಕ ಊರುಗಳ, ಅನೇಕ ಜನರ ಮಾತೃಭಾಷೆ ಕನ್ನಡವೇ ಆಗಿರುವುದನ್ನು ದಾಖಲಿಸಿದರು. ಅದೇ ಸಮ್ಮೇಳನದ ಪ್ರಾರಂಭದಲ್ಲಿ ಗದಗಿನ ಸಿದ್ಧರಾಮಪ್ಪ ಮಾನ್ವಿ ಅವರು ಕನ್ನಡಿಗರ ಮುಂದಿರುವ ಏಕೀಕರಣ ಸಮಸ್ಯೆ

ಬಗೆಗೆ ಸಭಿಕರಿಗೆ ಮನವರಿಕೆ ಮಾಡುತ್ತಾ ಆವರೆಗೆ ಕನ್ನಡ ಏಕೀಕರಣವನ್ನು ಪ್ರೋತ್ಸಾಹಿಸಿರುವ ರಾಷ್ಟ್ರ ನಾಯಕರ ಮಾತುಗಳನ್ನು ನೆನಪಿಸಿ, ಏಕೀಕರಣದ ತುರ್ತು ಅಗತ್ಯತೆಯನ್ನು ಪ್ರಸ್ತುತ ಪಡಿಸಿದರು. ಕನ್ನಡ ಪ್ರದೇಶಗಳನ್ನು ಉಪಾಯದಿಂದ ಕಸಿಯಲು ಆಂಧ್ರರು ಹೊಂಚು ಹಾಕುತ್ತಿರುವರೆಂದು ಅದನ್ನು ತಪ್ಪಿಸಲು ಕನ್ನಡಿಗರು ಎಚ್ಚರಗೊಂಡು ಕಾರ್ಯಪ್ರವೃತ್ತರಾಗಬೇಕೆಂದು ದೊಡ್ಡನಗೌಡರು ಕರೆ ನೀಡಿದರು. ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಬಳ್ಳಾರಿಯ ನವಸಂದೇಶ ಪತ್ರಿಕೆಯ ಸಂಪಾದಕರೂ ಹಾಗು ವಕೀಲರೂ ಆಗಿದ್ದ ಟಿ.ಹೆಚ್.ಎಂ. ಚಂದ್ರಶೇಖರ ಶಾಸ್ತ್ರಿಗಳು ಭಾರತದ ಬೇರೆ ಯಾವುದೇ ಭಾಷಿಕರಿಗಿಂತ ಕನ್ನಡಿಗರ ಸ್ಥಿತಿಯು ಅತ್ಯಂತ ಶೋಚನೀಯವಾಗಿದೆ ಎಂದು ಅಭಿಪ್ರಾಯಪಟ್ಟರು.

ಕೃಷ್ಣ, ತುಂಗಭದ್ರಾ, ಸಂಗಮದಿಂದ ನೀಲಗಿರಿಯವರೆಗೂ ಪುರ್ವ ಪಶ್ಚಿಮ ಭಾಗವೆಲ್ಲವೂ ಕನ್ನಡನಾಡು ಎಂದು ಅಧ್ಯಕ್ಷ ಸ್ಥಾನದಿಂದ ಸಮ್ಮೇಳನದಲ್ಲಿ ಘೋಷಿಸಿದ ಟಿ.ಹೆಚ್.ಎಂ. ಚಂದ್ರಶೇಖರ ಶಾಸ್ತ್ರಿಗಳು ಗಡಿ ನಿರ್ಣಾಯಕ ಸಮಿತಿಯ ಮುಂದೆ ಇದೇ ರೀತಿಯಲ್ಲಿ ಸಾಕ್ಷ್ಯ ನೀಡಲಿರುವುದಾಗಿಯೂ ತಿಳಿಸಿದರು. ಬೆಂಗಳೂರಿನ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಮ್ಮೇಳನದಲ್ಲಿ ಹಾಜರಿದ್ದರು. ಬಳ್ಳಾರಿಯ ಪುರ್ವ ಕರ್ನಾಟಕ ಏಕೀಕರಣ ಸಮಿತಿಯ ಕಾರ್ಯದರ್ಶಿಗಳಾದ ಕೋ.ಚೆನ್ನ ಬಸಪ್ಪನವರು ಧರ್ ಆಯೋಗದ ಪ್ರಶ್ನಾವಳಿಗೆ ಉತ್ತರಿಸುತ್ತಾ ಬಳ್ಳಾರಿ ಜಿಲ್ಲೆಯು ಇಡಿಯಾಗಿ ಒಂದೇ ಘಟಕವಾಗಿದೆ. ಅಲ್ಲಿನ ಜನರಲ್ಲಿ ಅಧಿಕ ಸಂಖ್ಯೆಯಲ್ಲಿರುವವು ಕನ್ನಡಿಗರು ಮತ್ತು ಅವರೆಲ್ಲರೂ ತಾವು ಕರ್ನಾಟಕದಲ್ಲಿ ವಿಲೀನಗೊಳ್ಳಲು ಅಭಿಪ್ರಾಯ ಹೊಂದಿದ್ದಾರೆ ಎಂದು ಸ್ಪಷ್ಟಪಡಿಸಿದರು.

ಹೋರಾಟದ ಮುಂಚೂಣಿಯಲ್ಲಿ ವೈ. ಗಾದಿಲಿಂಗನ ಗೌಡರು, ಅಳವಂಡಿ ಶಿವಮೂರ್ತಿಸ್ವಾಮಿಗಳು ಮತ್ತಿತರರು ಇದ್ದರು. ಬಳ್ಳಾರಿ ಕರ್ನಾಟಕ ಕ್ರಿಯಾಸಮಿತಿಯ ನಿಯೋಗವೊಂದು ಮುಖ್ಯಮಂತ್ರಿಗಳನ್ನು ಅವರ ಸಚಿವ ಸಂಪುಟದ ಸದಸ್ಯರನ್ನು ಭೇಟಿ ಮಾಡಿತು. ಆ ನಿಯೋಗದಲ್ಲಿ ಕ್ರಿಯಾಸಮಿತಿಯ ಅಧ್ಯಕ್ಷ ಶ್ರೀ ಜಂತಕಲ್ಲು ಗಾದಿಲಿಂಗಪ್ಪ ಹರಗಿನದೋಣಿ ಚೆನ್ನಬಸಪ್ಪ, ಅಲ್ಲಂ ಕರಿಬಸಪ್ಪ, ಬಿ.ಎಂ. ರೇವಣಸಿದ್ದಯ್ಯ, ಗಡಿಗಿ ಮರಿಸ್ವಾಮಪ್ಪ ಮುಂತಾದವರು ನಿಯೋಗದಲ್ಲಿದ್ದರು. ಬಳ್ಳಾರಿ ಜಿಲ್ಲೆಯನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಳ್ಳಬಹುದೆಂಬ ಮನವಿಗೆ ಸಹಿ ಪಡೆದು ಮಾನ್ಯ ಮುಖ್ಯಮಂತ್ರಿಗಳಿಗೆ ಅರ್ಪಿಸಲಾಯಿತು. ಆ ಒಪ್ಪಿಗೆ ಮನವಿಯ ಆಧಾರದ ಮೇಲೆ ಮೈಸೂರು ವಿಧಾನಸಭೆ ಬಳ್ಳಾರಿಯನ್ನು ಮೈಸೂರಿನಲ್ಲಿ ವಿಲೀನ ಮಾಡಬೇಕೆಂದು ಸರ್ವಾನುಮತದ ಗೊತ್ತುವಳಿಯನ್ನು ಅಂಗೀಕರಿಸಿತು. ಈ ಗೊತ್ತುವಳಿಯನ್ನು ಕೇಂದ್ರ ಸರ್ಕಾರಕ್ಕೆ ಕಳಿಸಲಾಯಿತು.

ತೊಗರಿ ಸರ್ವಮಂಗಳಮ್ಮ ತಮ್ಮ ಲೇಖನಗಳ ಮೂಲಕ ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ಹಿರಿಮೆ, ಗರಿಮೆಗಳನ್ನು ಕನ್ನಡಿಗರಿಗೆ ಪರಿಚಯಿಸಿದರು. ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಹೆಚ್.ಕೆ. ವೀರಣ್ಣಗೌಡ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಎಸ್.ನಿಜಲಿಂಗಪ್ಪ ಬಳ್ಳಾರಿ ಜಿಲ್ಲೆಯನ್ನು ಮೈಸೂರಿಗೆ ಸೇರಿಸುವುದರಲ್ಲಿ ತುಂಬಾ ಶ್ರಮಿಸಿದರು.

ಕರ್ನಾಟಕದ ಉತ್ತರ ಭಾಗದಲ್ಲೂ ವಿಶೇಷವಾಗಿ ಮುಂಬೈ ಅಧಿಪತ್ಯಕ್ಕೆ ಸೇರಿದ ಜನರಿಗೆ ಕಳೆದು ಹೋಗಿರುವ ತಮ್ಮ ಭಾಷಿಕ ಮತ್ತು ಸಾಂಸ್ಕೃತಿಕ ಹಕ್ಕುಗಳ ಅರಿವಾಯಿತು. ವಿರೂಪಾಕ್ಷಪ್ಪ ಹೂಲಿ, ಡೆಪ್ಯುಟಿ ಚೆನ್ನಬಸಪ್ಪ ಮುಂತಾದ ಅಧಿಕಾರಿಗಳ ಪ್ರಯತ್ನದಿಂದಾಗಿ ಮರೆಯಾಗುತ್ತಿದ್ದ ಕನ್ನಡ ಶಿಕ್ಷಣ ಜಾಗೃತಗೊಂಡಿತು. ಅವರು ಪಟ್ಟು ಹಿಡಿದದ್ದರಿಂದಲೇ ಕನ್ನಡ ಶಾಲೆಗಳು ಆರಂಭಗೊಂಡವು ಮತ್ತು ಏಕೀಕರಣ ಚಳುವಳಿ ಪ್ರಾರಂಭವಾಯಿತು. 1861ರಲ್ಲಿ ಬೆಳಗಾವಿಗೆ ಸ್ಥಳಾಂತರಿಸಲಾದ ನಾರ್ಮಲ್ ಸ್ಕೂಲ್‌ಗೆ ಡೆಪ್ಯುಟಿ ಚೆನ್ನಬಸಪ್ಪನವರು 1864ರಲ್ಲಿ ಮುಖ್ಯಸ್ಥರಾಗಿ ಬಂದ ನಂತರ ಶಾಲೆಯ ಸ್ವರೂಪವೇ ಬದಲಾಯಿತು. ಕನ್ನಡ ಶಿಕ್ಷಕರನ್ನು ತರಬೇತು ಗೊಳಿಸಲೆಂದೇ ಆರಂಭವಾದ ನಾರ್ಮಲ್ ಶಾಲೆಯಲ್ಲಿ ಕನ್ನಡ ವಿದ್ಯಾರ್ಥಿಗಳ ಕೊರತೆಯ ಜೊತೆಗೆ ಕನ್ನಡ ಪಠ್ಯಪುಸ್ತಕಗಳ ಕೊರತೆಯು ಇದ್ದುದನ್ನು ಮನಗಂಡ ಡೆಪ್ಯುಟಿ ಚೆನ್ನಬಸಪ್ಪನವರು ಆ ಕೊರತೆಗಳನ್ನು ನಿವಾರಿಸುವಲ್ಲಿ ಯಶಸ್ವಿಯಾದರು. ಆ ಬಗ್ಗೆ ನಾರ್ಮಲ್ ಸ್ಕೂಲ್‌ನ ಶತಮಾನೋತ್ಸವ ಸಮಾರಂಭದಲ್ಲಿ ಉದ್ಘಾಟನಾ ಭಾಷಣ ಮಾಡಿದ ಶ್ರೀ.ಮ.ನಿ.ಪ್ರ. ಶ್ರಿ ಬಂಥನಾಳ ಶಿವಯೋಗೀಶ್ವರರು ಪ್ರಸ್ತಾಪಿಸುತ್ತ ವಿರುಪಾಕ್ಷಪ್ಪ ಹೂಲಿ, ಡೆಪ್ಯುಟಿ ಚೆನ್ನಬಸಪ್ಪನವರ ಪ್ರಭಾವದಿಂದ ಕನ್ನಡ ಮಾತೆಯ ಪ್ರಾಣ ಉಳಿಯಿತು ಹಾಗೂ ಕನ್ನಡ ಏಕೀಕರಣ ಚಳುವಳಿ ಯಶಸ್ವಿಯಾಯಿತು.

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಇತಿಹಾಸವೇ ಇಂದಿನ ಕನ್ನಡ ಚಳುವಳಿಯ ಹಿನ್ನಲೆಯಾಗಿದೆ. ಗುರುಶಿದ್ದಪ್ಪ ಗಿಲಗಂಚಿ, ಶಾಂತಿವೀರಪ್ಪ ಮೆಣಸಿನಕಾಯಿ, ಶಿವನಪ್ಪ ದೇಸಾಯಿ ಮುಂತಾದವರು ೧೯೦೦ ರಿಂದ ೧೯೪೦ ರವರೆಗೆ ಏಕೀಕರಣಕ್ಕೆ ಶ್ರಮಿಸಿದರು. ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ, ಸಿದ್ಧಾಂತಿ ಶಿವಶಂಕರ ಶಾಸ್ತ್ರಿ ಇವರು ಲೇಖಕರಾಗಿ ಸೇವೆ ಸಲ್ಲಿಸಿದರು. ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರಬಲವಾಗಿ ಬೆಳೆಯುತ್ತ ತನ್ನ ಉದ್ದೇಶಿತ ಕನ್ನಡ ನುಡಿಯ ಸೇವೆ ಮಾಡುತ್ತಲೇ ಕರ್ನಾಟಕದ ಏಕೀಕರಣದ ಬಗೆಗೂ ಗಮನ ಹರಿಸಿತು. ೦೭.೧೦.೧೯೧೭ ರಂದು ನಡೆದ ಸಂಘದ ವ್ಯವಸ್ಥಾಪಕ ಸಮಿತಿಯ ಸಭೆಯು





ಅರಟಾಳ ರುದ್ರಗೌಡರು, ಶ್ರೀ ರಾವ್‌ಬಹಾದ್ದೂರ್, ಎಸ್.ಎನ್. ಆಂಗಡಿ, ಬೆಳಗಾವಿ ಇವರ ಹೆಸರುಗಳನ್ನು ಗಮನಿಸಿದಾಗ ಅವರು ಏಕೀಕರಣಕ್ಕೆ ಹೋರಾಡಿ ಶ್ರಮಿಸಿದರು.

ಬೆಳಗಾವಿಯ ಸಿರಸಂಗಿ ಮನೆತನದವರು, ಕಾರಂಜಿ ಮಠದ ಮನೆತನದವರು, ಚರಂತಿ ಮಠ ಮನೆತನದವರು, ಶಾಸ್ತ್ರಿ ಮಠ ಮನೆತನದವರು, ಕೋರೆ ಮನೆತನದವರು ಏಕೀಕರಣಕ್ಕಾಗಿ ದುಡಿದವರು. ಬಿಜಾಪುರದ ಗಚ್ಚಿನ ಮಠ ಮನೆತನದವರು, ಬಾಗಲಕೋಟೆಯ ನಂದಿ ಮಠ ಮನೆತನದವರು, ಗದುಗಿನ ಮಾಳಕೊಪ್ಪ ಮಠ, ಮುತ್ತಿನ ಪೆಂಡಿ ಮಠ, ಹೊಸಮಠ, ಶಾಬಾದಿ ಮಠ, ಮಾನ್ವಿ ಮನೆತನದವರು,, ರಾಣೆಬೆನ್ನೂರಿನ ವಡೆಯರ್ ಮನೆತನದವರು, ಏಕೀಕರಣದಲ್ಲಿ ದುಡಿದ ಪ್ರಮುಖರು. ೧೯೪೪ರ ಡಿಸೆಂಬರ್ ತಿಂಗಳ ೨೮ರಂದು ಧಾರವಾಡದಲ್ಲಿ ೯ನೇಯ ಕರ್ನಾಟಕದ ಏಕೀಕರನ ಪರಿಷತ್ತು ಸಮಾವೇಶಗೊಂಡಿತ್ತು. ಸ್ವಾಗತಾಧ್ಯಕ್ಷತೆಯನ್ನು ಜಸ್ಟಿಸ್ ಎಸ್.ಎಸ್. ಮಳೀಮಠರು ವಹಿಸಿದ್ದರು. ಯಶಸ್ವಿಯಾಗಿ ನಡೆದ ಪರಿಷತ್ತಿನಲ್ಲಿ ಎಸ್.ಎಸ್. ಮಳೀಮಠರು ನಾಲ್ಕುವರೆ ವರ್ಷಗಳ ನಂತರ ನಡೆಯುತ್ತಿರುವ ಪರಿಷತ್ತು ಹದಗೆಟ್ಟ ರಾಜಕೀಯ ವಾತಾವರಣದಲ್ಲಿ ಏಕೀಕರಣ ಚಳುವಳಿಗೆ ಜೀವಕಳೆಯನ್ನು ತುಂಬಲು ನಡೆಯುತ್ತಿದೆ ಎಂದು ತಿಳಿಸಿದರು. ಸ್ವಾತಂತ್ರ್ಯದ ಪ್ರಶ್ನೆಯನ್ನು ಮರೆತಂತಿರುವ ಸಂದರ್ಭದಲ್ಲಿ ಏಕೀಕರಣ ವಿಷಯವಾಗಿ ಎತ್ತುವ ಧ್ವನಿ ಎಲ್ಲರಿಗೂ ಕೇಳಬಹುದೆಂಬ ಆಶಾಭಾವ ವ್ಯಕ್ತಪಡಿಸಿದರು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಮೊದಲ ಕರ್ನಾಟಕ ಏಕೀಕರಣ ಪರಿಷತ್ತಿನ ನಂತರ, ೨೦ ವರ್ಷಗಳ ಅವಧಿಯಲ್ಲಿ ಕೇವಲ ಎಂಟೇ ಪರಿಷತ್ತುಗಳು ನಡೆದಿರುವುದನ್ನು ಪ್ರಸ್ತಾಪಿಸಿ ಚಳುವಳಿಯ ನಿಧಾನ ಗತಿಗೆ ಕಾರಣಗಳನ್ನು ಪರಿಶೀಲಿಸಿದರು. ಮುಂಬಯಿ ಅಧಿಪತ್ಯದಲ್ಲಿ ಕೃಷಿಮಂತ್ರಿಗಳಾಗಿದ್ದ ಎಂ.ಪಿ. ಪಾಟೀಲರು ಮಹಾಸಭೆಯ ಅಧ್ಯಕ್ಷರಾಗಿದ್ದರು. ಸ್ವಾಗತಾಧ್ಯಕ್ಷ ಉರುವಕೊಂಡ ಚೆನ್ನಬಸಪ್ಪನವರು ಕನ್ನಡನಾಡು ಒಂದಾಗ ಬೇಕೆಂಬ ವಿಚಾರದಲ್ಲಿ ಯಾರದೂ ಭಿನಾಭಿಪ್ರಾಯವಿಲ್ಲ ಎಂದು ತಿಳಿಸಿದರು. ಕರ್ನಾಟಕದ ಎಲ್ಲಾ ಪ್ರದೇಶ ಮತ್ತು ಸಂಸ್ಥಾನಗಳ ಜನ ಮೊದಲ ಬಾರಿಗೆ ಹೆಚ್ಚು ಸಂಖ್ಯೆಯಲ್ಲಿ ಸೇರಿಸುವುದನ್ನು ಪ್ರಶಂಶಿಸಿದರು. ಅಧ್ಯಕ್ಷರಾದ ಎಂ.ಪಿ. ಪಾಟೀಲರು ಬ್ರಿಟಿಷ್ ಮತ್ತು ಸಂಸ್ಥಾನೀ ಕರ್ನಾಟಕಗಳ ಕನ್ನಡಿಗರನ್ನು ಸೋದರ ಭಾವದಿಂದ ಒಂದೆಡೆ ಸೇರಿಸಿದ ಕರ್ನಾಟಕ ಏಕೀಕರಣ ಸಂಘದ ಕಾರ್ಯವನ್ನು ಮೆಚ್ಚಿ ಆವರೆಗಿನ ಅದರ ಸಾಧನೆಯನ್ನು ಪ್ರಶಂಶಿಸಿದರು. ಭಾರತಕ್ಕೆ ಸ್ವಾತಂತ್ರ್ಯವು ಹೇಗೋ ಕರ್ನಾಟಕಕ್ಕೆ ಸ್ವಾಯತ್ತತೆಯು ಹಾಗೆ ಎಂದು ಏಕೀಕರಣ ಔಚಿತ್ಯವನ್ನು ಪ್ರಸ್ತಾಪಿಸಿ ಕರ್ನಾಟಕದ್ದಲ್ಲದ ಒಂದು ಗುಂಜಿ ತೂಕದ ಮಣ್ಣು ನಮಗೆ ಬೇಡ. ಇತರರ ನ್ಯಾಯವಾದ ಹಕ್ಕು ಭಾದ್ಯತೆಗಳನ್ನು ಆಕ್ರಮಿಸುವುದೂ ನಮಗೆ ಬೇಕಾಗಿಲ್ಲ. ಆದರೆ ಕರ್ನಾಟಕ ಒಂದಂಗುಲ ನೆಲವೂ ನಮ್ಮ ಕೈತಪ್ಪಿ ಹೊಗುವುದನ್ನು ನಾವು ಸಹಿಸಲಾರೆವು. ಎಂದು ಕನ್ನಡಿಗರ ಅಭಿಪ್ರಾಯಗಳನ್ನು ಸ್ಪಷ್ಟಪಡಿಸಿದರು. ದಾವಣಗೆರೆಯಲ್ಲಿ ನಡೆದ ಮಹಾಸಭೆಯ ಗೊತ್ತುವಳಿಗಳ ಉದ್ದೇಶ ಸಾಧನೆಗಾಗಿ ಅವಶ್ಯ ಕಂಡ ಎಲ್ಲಾ ಬಗೆಯ ಕಾರ್ಯ ಕೈಗೊಳ್ಳಲು ಕೆಳಗೆ ಕಾಣಿಸಿದ ಮಹನೀಯರ ಒಂದು ಸಮಿತಿಯನ್ನು ಈ ಮಹಾ ಪರಿಷತ್ತು ನೇಮಿಸಿತ್ತು. ಅದರಲ್ಲಿ ಎಂ.ಪಿ. ಪಟೀಲ್ ಎಸ್. ನಿಜಲಿಂಗಪ್ಪ ಇದ್ದರು.

ಬಳ್ಳಾರಿಯ ಟಿ.ಹೆಚ್.ಎಂ. ಸದಾಶಿವಯ್ಯನವರು ಗಡಿಯ ನಿರ್ಣಯಕ್ಕೆ ಮನೆನಾಡಿನ ತತ್ವ ( Doctrine of homeland) ಅವಶ್ಯಕವೆಂದು ನಂಬಿದ್ದರು. ಕರ್ನಾಟಕ ಗಡಿ ಗೆರೆಗಳು ಎಂಬ ಪುಸ್ತಕವನ್ನು ಶಿವಸುತ ಎಂಬ ಕಾವ್ಯನಾಮದ ಮೇಲೆ ೧೯೪೯ರಲ್ಲಿ ಪ್ರಕಟಿಸಿದರು. ಬಳ್ಳಾರಿಯಲ್ಲಿ ಮೇ ೨೨, ೨೩, ೨೪ ೧೯೨೬ರಂದು ನಡೆದ ೧೨ನೇ ಸಮ್ಮೇಳನದ ಅಧ್ಯಕ್ಷತೆಯನ್ನು ಫ.ಗು. ಹಳಕಟ್ಟಿಯವರು ವಹಿಸಿದ್ದರು. ಕರ್ನಾಟಕತ್ವದ ಭಾವನೆಯನ್ನು ಜಾಗ್ರತ ಪಡಿಸಲಿಕ್ಕೆ ಸದಾ ಪ್ರಯತ್ನಿಸಿ ಏಕೀಕರಣಕ್ಕಾಗಿ ಹೋರಾಡಬೇಕೆಂದು ತಿಳಿಸಿದರು. ಮುಧೋಳದಲ್ಲಿ ೧೯೪೮ರ ವೇಳೆಗೆ ಅಲ್ಲಿನ ಮರಾಠಾ ದಿವಾನರ ಕಾರಣದಿಂದ ಕನ್ನಡಕ್ಕೆ ತೊಂದರೆಯಾಗುವ ಸಂಭವವಿತ್ತು. ಆದರೆ ಆ ಭಾಗದಲ್ಲಿ ಗವಿಮಠದ ಮೃತ್ಯುಂಜಯಸ್ವಾಮಿಗಳು ಕನ್ನಡ ಪರ ಚಟುವಟಿಕೆಗಳಿಗೆ ಆಧಾರವಾಗಿ ನಿಂತು ಕನ್ನಡಿಗರ ಸ್ವಾಭಿಮಾನವನ್ನು ರಕ್ಷಿಸಿ ಏಕೀಕರಣಕ್ಕೆ ಹೋರಾಡಿದರು. ಭದ್ರಾವತಿಯ ಬಿ.ಪಿ. ಹಾಲಪ್ಪ ಮೈಸೂರ ಸಂಸ್ಥಾನದ ಕರ್ನಾಟಕ ಏಕೀಕರಣದ ಹೋರಾಟ ದಲ್ಲಿ ತುಂಬಾ ಶ್ರಮಿಸಿದ್ದರು. ಭಾಲ್ಕಿಯ ಹಿರೇಮಠದ ಪಟ್ಟಾಧ್ಯಕ್ಷರಾದ ಶ್ರೀ ಚೆನ್ನಬಸವ ಪಟ್ಟದೇವರು ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕನ್ನಡವನ್ನುಳಿಸಲು ಶ್ರಮಿಸಿದವರಲ್ಲಿ ಒಬ್ಬರು. ಮನೆಗೊಬ್ಬರಾದರು ಕನ್ನಡ ಕಲಿಯುವಂತೆ ಪ್ರೇರಣೆ ನೀಡಿದ ಗುರುಗಳು ಹಲವಾರು ನಿಬಂಧಗಳ ನಡುವೆ ಕನ್ನಡ ಶಾಲೆಗಳನ್ನು ನಡೆಸಿ ಏಕೀಕರಣದಲ್ಲಿ ಭಾಗವಹಿಸಿದ್ದರು.

೧೯೪೭ ಜೂನ್ ೯ರಂದು ಬೆಂಗಳೂರು ನಗರ ಪ್ರದೇಶ ಸಮಿತಿಯು ಡಿ.ಹೆಚ್. ಚಂದ್ರಶೇಖರಯ್ಯ ಏಕೀಕರಣದ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಿದ್ದರು. ೧೧.೦೯.೧೯೪೭ ರಂದು ಬಳ್ಳಾರಿ ಜಿಲ್ಲೆಯ ಹೊಳಲುಗುಂದಿಯಲ್ಲಿ ಎರಡನೇ ಕರ್ನಾಟಕ ಏಕೀಕರಣ ಪರಿಷತ್ತು ನಡೆದಾಗ ಅಂದಾನೆಪ್ಪ ದೊಡ್ಡಮೇಟಿ ಹಾಗೂ ಗೌಡರ ಬಸವನಗೌಡರು ಭಾಷಣ ಮಾಡಿದರು. ೧೯೪೭ರಲ್ಲೇ ಬಳ್ಳಾರಿ ಜಿಲ್ಲೆಯ ಹರಪನ

ಹಳ್ಳಿಯಲ್ಲಿ ನಡೆದ ೩೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಕರ್ನಾಟಕ ಏಕೀಕರಣ ಪರವಾಗಿ ನಡೆದ ಒಂದು ಸ್ತುತ್ಯ ಕಾರ್ಯವಾಗಿತ್ತು. ಆ ಸಂದರ್ಭದಲ್ಲಿ ಹರಪನಹಳ್ಳಿಯವರೇ ಆದ ಬಳ್ಳಾರಿ ಜಿಲ್ಲೆಯ ಕರ್ನಾಟಕ ಸಂಘದ ಕಾರ್ಯದರ್ಶಿಗಳಾದ ಟಿ.ಹೆಚ್.ಎಂ. ಶಿವಯ್ಯನವರು ಏಕೀಕರಣದ ಗುರಿಗಳನ್ನು ತಿಳಿಸಿದರು. ಕರ್ನಾಟಕದ ಏಕೀಕರಣದ ಮಹಾ ಸಮಿತಿಯ ಪ್ರಚಾರಾಧಿಕಾರಿ ಎಸ್.ಬಿ. ಹಿರೇಮಠರು ಕನ್ನಡಿಗರೆಲ್ಲರ ಜೀವಾಳದ ಪ್ರಶ್ನೆಯಾಗಿರುವ ಕರ್ನಾಟಕ ಪ್ರಾಂತ ರಚನೆಗಾಗಿ ಅನೇಕ ಸಂಘ ಸಂಸ್ಥೆಗಳು, ಪತ್ರಿಕೆಗಳು ಮತ್ತು ಅನೇಕ ಮಹಾನೀಯರು ಶ್ರಮಿಸುತ್ತಿರುವ ಸಂದರ್ಭದಲ್ಲಿ ಕರ್ನಾಟಕದ ಎಲ್ಲ ಜನರ ಸಲಹೆ, ಸೂಚನೆ ಮತ್ತು ಸಹಕಾರಗಳು ದೊರೆತರೆ ಮಹಾಸಮಿತಿಯ ಧ್ಯೇಯ ಸಾಧನೆ ಸುಗಮವಾಗುವುದೆಂದು ಕರೆ ನೀಡಿದರು. ಕೊಳ್ಳೆಗಾಲದ ಕರ್ನಾಟಕ ಏಕೀಕರಣ ಸಂಘದ ಅಧ್ಯಕ್ಷರಾದ ಎಸ್.ಸಿ. ವಿರೂಪಾಕ್ಷಯ್ಯನವರು ಧರ್ ಆಯೋಗಕ್ಕೆ ಮನವಿ ಯೊಂದನ್ನು ನೀಡಿ, ಕೊಳ್ಳೆಗಾಲ ತಾಲ್ಲೂಕು ಪೂರ್ಣವಾಗಿ ಮತ್ತು ಗೋಪಿಚೆಟ್ಟಿಪಾಳ್ಯ ಮತ್ತು ಭವಾನಿ ತಾಲ್ಲೂಕುಗಳ ಕೆಲವು ಭಾಗಗಳಲ್ಲಿ ಕನ್ನಡ ಭಾಷಿಕರೇ ಅಧಿಕವಾಗಿರುವುದರಿಂದ ಅವೆಲ್ಲವನ್ನೂ ಕರ್ನಾಟಕಕ್ಕೆ ಸೇರಿಸಬೇಕೆಂದು ಕೋರಿದರು.

ಬಳ್ಳಾರಿಯ ಕರ್ನಾಟಕ ಛೇಂಬರ್ ಆಫ್ ಕಾಮರ್ಸ್‌ನ ಅಧ್ಯಕ್ಷರಾದ ವೈ. ಮಹಾಬಲೇಶ್ವರಪ್ಪ ಬದನೇಹಾಳಿನ ಗ್ರಾಮಕೇಂದ್ರ ಕರ್ನಾಟಕ ಏಕೀಕರಣದ ಸಂಘದ ಅಧ್ಯಕ್ಷ ಬಿ. ರಾಜನಗೌಡ, ಅದೇ ಊರಿನ ಬಿ. ರಂಗನಗೌಡರು ಆಯೋಗಕ್ಕೆ ಉತ್ತರ ಸಲ್ಲಿಸಿದರು. ಸೊಲ್ಲಾಪುರ ನಗರ ಮತ್ತು ತಾಲ್ಲೂಕುಗಳು ಕರ್ನಾಟಕಕ್ಕೆ ಸೇರಬೇಕೆಂಬುದು ಅಲ್ಲಿನ ಪ್ರಮುಖ ಮಹಿಳೆ ಜಯದೇವಿತಾಯಿ ಲಿಗಾಡೆಯವರ ಹಂಬಲವಾಗಿತ್ತು. ಧರ್ ಆಯೋಗದೆದುರು ಸೊಲ್ಲಾಪುರದ ಪರವಾಗಿ ಸಾಕ್ಷಿ ನುಡಿಯಲು ರಚಿತವಾದ ನಿಯೋಗದಲ್ಲಿ ಜಯದೇವಿತಾಯಿ ಲಿಗಾಡೆಯವರೂ ಇದ್ದರು. ಹುಬ್ಬಳ್ಳಿಯಲ್ಲಿ ಧರ್ ಆಯೋಗಕ್ಕೆ ಮನವಿಯನ್ನು ಸಲ್ಲಿಸಿ ಸಾಕ್ಷ್ಯ ನೀಡಿದ ಜಯದೇವಿತಾಯಿ ಲಿಗಾಡೆಯವರು ಸೊಲ್ಲಾಪುರ ತಾಲ್ಲೂಕು ಎಂದೆಂದಿಗೂ ಕರ್ನಾಟಕದ ಭಾಗವೆ ಆಗಿ ಉಳಿಯಬೇಕೆಂಬ ದೃಢಸಂಕಲ್ಪದಿಂದ ಬಹುವಾಗಿ ಶ್ರಮಿಸಿದರು.

ಸೊಲ್ಲಾಪುರದಲ್ಲಿ ಮನ್ರೋ ಮುಖ್ಯ ಕಲೆಕ್ಟರ್ ಆಗಿದ್ದ ಕಾಲದಲ್ಲೇ ಅದು ಕನ್ನಡಿಗರೇ ಬಹುಸಂಖ್ಯಾತರಾಗಿರುವ ಪ್ರದೇಶವೆಂದು ಈಸ್ಟ್ ಇಂಡಿಯಾ ಕಂಪನಿಗೆ ವರದಿ ಮಾಡಿದ್ದ ಸೊಲ್ಲಾಪುರ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಜಯದೇವಿ ತಾಯಿ ಲಿಗಾಡೆಯವರು ಅಕ್ಕನ ಜಯಂತಿ, ಬಸವ ಜಯಂತಿ, ನಾಡಹಬ್ಬಗಳ ಆಚರಣೆಯ ಮೂಲಕ ಕನ್ನಡತನವನ್ನು ಜಾಗೃತವಾಗಿರಿಸಿದರು.

ಅಕ್ಕಲಕೋಟೆಯ ಚೆನ್ನವೀರ ಕಲ್ಯಾಣಶೆಟ್ಟರು ಮತ್ತು ಜಯದೇವಿತಾಯಿ ಲಿಗಾಡೆಯವರ ಜೊತೆಯಲ್ಲಿ ಆ ಭಾಗದಲ್ಲಿ ಕನ್ನಡಪರ ಧ್ವನಿ ಎತ್ತಿ ಏಕೀಕರಣಕ್ಕಾಗಿ ಹೋರಾಡಿದ್ದರು.

೧೯೪೭ರಲ್ಲಿ ಸಿದ್ಧಯ್ಯ ಪುರಾಣಿಕ, ಚೆನ್ನಬಸವ ಪಟ್ಟದದೇವರು ಮುಂತಾದವರು ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕನ್ನಡಪರ ಧ್ವನಿಯನ್ನು ಕಾಪಾಡಿಕೊಂಡೇ ಬಂದಿದ್ದರು. ಆ ಸಂದರ್ಭದಲ್ಲಿ ಸರ್ದಾರ್ ಶರಣಗೌಡ ಇನಾಂದಾರರ ಪಾತ್ರವು ಬಹುಮುಖ್ಯವಾದದ್ದು. ಹಳ್ಳಿಕೇರಿ ಗುದ್ಲೆಪ್ಪನವರು, ಪಾಟೀಲ ಪುಟ್ಟಪ್ಪನವರು ಏಕೀಕರಣಕ್ಕಾಗಿ ಶ್ರಮಿಸಿದವರಲ್ಲಿ ಪ್ರಮುಖರು. ಎಸ್.ಆರ್. ಕಂಠಿ, ಬಿ.ಡಿ. ಜತ್ತಿ, ಚನ್ನಬಸಪ್ಪ ಅಂಬಲಿ ವೀರನಗೌಡ ಪಾಟೀಲ್ ಮುಂತಾದವರು ಏಕೀಕರಣಕ್ಕೆ ಹೋರಾಡಿದವರು. ಸಾಬರಮತಿ ಜೈಲಿನಲ್ಲಿದ್ದವರ ಪೈಕಿ ವೀರಭದ್ರಪ್ಪನ್ ಹಳ್ಳಿಕೆರೆ, ಹುಬ್ಬಳ್ಳಿ, ಚೆನ್ನಪ್ಪವಾಲಿ ಬೈಲಹೊಂಗಲ್, ಚೆನ್ನಯ್ಯಸ್ವಾಮಿ ಓಂಕಾರಾಮಠ ಬೆಳಗಾವಿ ಜಿಲ್ಲೆ. ಮಹದೇವಪ್ಪ ಮುರುಗೋಡು ಹುಬ್ಬಳ್ಳಿ, ಮುರುಗಯ್ಯ ಬೀಜಾಪುರ ಇಟಗಿ ವೇದಮೂರ್ತಿ ಹುಬ್ಬಳ್ಳಿ, ಇವರು ಪ್ರಮುಖರು.

ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ನಿವೃತ್ತ ನಿರ್ದೇಶಕ ಆರ್.ಎಸ್. ಪಂಚಮುಖಿಯವರು ೦೫.೦೫.೧೯೫೩ರಂದು ಬಳ್ಳಾರಿಯ ಕರ್ನಾಟಕ ಕ್ರಿಯಾ ಸಮಿತಿಯವರಿಂದ ಮಿಶ್ರ ಅವರಿಗೆ ಬಳ್ಳಾರಿಯು ಕರ್ನಾಟಕಕ್ಕೆ ಸೇರಬೇಕಾದ ಔಚಿತ್ಯದ ಬಗೆಗೆ ತಿಳುವಳಿಗೆ ನೀಡಬೇಕೆಂದು ಮನವಿ ಅರ್ಪಿಸಿದರು. ಮೈಸೂರು ಭಾಗದಲ್ಲಿ ಎಂ.ಎಸ್. ಗುರುಪಾದ ಸ್ವಾಮಿಯವರು ಏಕೀಕರಣ ಹೋರಾಟದಲ್ಲಿ ಭಾಗವಹಿಸಿದ್ದರು. ತುಮಕೂರಿನ ಆರ್.ಎಸ್. ಆರಾಧ್ಯರವರು ಏಕೀಕರಣಕ್ಕೆ ಹೋರಾಡಿದವರು. ಆದರಂಗು ಶಂಕರಗೌಡ ಪಾಟೀಲ, ಚಂದ್ರಶೇಖರ ಪಾಟೀಲ್, ಗುಬ್ಬಿ ವೀರಣ್ಣ, ಎಚ್.ವಿ. ನಂಜುಂಡಯ್ಯ, ಎಸ್.ಸಿ. ನಂದಿಮಠ, ಶಿ.ಶಿ. ಬಸವನಾಳ, ಬಸವರಾಜ ಕಟ್ಟಿಮನಿ, ಎಸ್.ಆರ್. ಬೊಮ್ಮಾಯಿ, ಬಸರಿಗಿಡದವೀರಪ್ಪ, ಪ್ರೊ॥ ಎ.ಎಂ. ರಾಜಶೇಖರಯ್ಯ, ಬಿ. ಶಿವಮೂರ್ತಿ ಶಾಸ್ತ್ರಿ, ಸಿದ್ಧಾಂತಿ ಶಿವಶಂಕರ ಶಾಸ್ತ್ರಿ ಇನ್ನೂ ಮುಂತಾದವರು ಏಕೀಕರಣ ಹೋರಾಟ ಮಾಡಿದವರಲ್ಲಿ ಪ್ರಮುಖರು.

ಸುಮಾರು ೧೯೦೫ರಿಂದ ೧೯೨೦ರವರೆಗಿನ ಕಾಲದಲ್ಲಿ ಭಾರತದ ರಾಜಕೀಯ ರಂಗದಲ್ಲಿ ಕಾಲಿಟ್ಟ ಕರ್ನಾಟಕದ ಕಾರ್ಯಕರ್ತರು ಎರಡು ಕನಸುಗಳನ್ನು ಕಟ್ಟಿದ್ದರು. ಎರಡು ನಕ್ಷೆಗಳನ್ನು ಮುಂದಿಟ್ಟುಕೊಂಡರು ಒಂದು ಭಾರತದ ಸ್ವಾತಂತ್ರ್ಯ ಇನ್ನೊಂದು ಕರ್ನಾಟಕದ ಏಕೀಕರಣ ವಾಸ್ತವ





ವಾಗಿ ಕನ್ನಡ ಭಾಷಿಕರಾದ ಜನ 20 ಆಡಳಿತಗಳಲ್ಲಿ ಹಂಚಿಹೋಗಿದ್ದರು. ಅದು ಹೇಗೆಂದರೆ, ಮೈಸೂರು ಸಂಸ್ಥಾನ, ಮದ್ರಾಸ್ ಪ್ರಾಂತ, ಮುಂಬಯಿ ಪ್ರಾಂತ, ಕೊಡಗು ಸಂಸ್ಥಾನ, ಹೈದ್ರಬಾದ್ ಸಂಸ್ಥಾನ, ರಾಮುದುರ್ಗ ಸಂಸ್ಥಾನ, ಸಾಂಗ್ಲಿ ಸಂಸ್ಥಾನ, ಮೀರಜ್ ಸಂಸ್ಥಾನ, ಜಮಖಂಡಿ ಸಂಸ್ಥಾನ, ಮುಧೋಳು ಸಂಸ್ಥಾನ, ಜತ್ ಸಂಸ್ಥಾನ, ಅಕ್ಕಲಕೋಟೆ ಸಂಸ್ಥಾನ, ಕೊಲ್ಲಾಪುರ ಸಂಸ್ಥಾನ, ಸಂಡೂರು ಸಂಸ್ಥಾನ, ಸವಣೂರು ಸಂಸ್ಥಾನ ಮುಂತಾದುವುಗಳಲ್ಲಿ ವೀರಶೈವರು ಹೆಚ್ಚಿನ ಪಾತ್ರದಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದಿದ್ದಾರೆ.

ಧಾರವಾಡದಲ್ಲಿ ಸ್ಥಾಪಿಸಲಾದ ಕರ್ನಾಟಕದ ಇತಿಹಾಸದ ಸಂಶೋಧನಾ ಮಂಡಳಿ, ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ, ಶಿವಮೊಗ್ಗದ ಕರ್ನಾಟಕ ಸಂಘ, ಅದೇ ರೀತಿ ಸುರುಪುರ ಬಳಿಯ ರಂಗಂಪೇಟೆ, ರಾಯಚೂರು, ಪುತ್ತೂರು ಮುಂತಾದೆಡೆ ಇದ್ದ ಕರ್ನಾಟಕ ಸಂಘಗಳು ನಾಡು ನುಡಿಗಳ ಅಭಿಮಾನಗಳ ಜಾಗೃತಿಗೆ ದುಡಿದವು. ಧಾರವಾಡದಿಂದ ಆರಂಭಿಸಿ ನಾಡಹಬ್ಬ ಆಚರಣೆ ಎಲ್ಲೆಡೆ ಆಗುತ್ತಿತ್ತು. ವಾಚನಾಲಯ, ಗ್ರಂಥಾಲಯ, ವ್ಯಾಯಮ ಶಾಲೆಗಳು ತಮ್ಮದೇ ಪಾತ್ರ ವಹಿಸಿದ್ದವು. ಬಳ್ಳಾರಿಯಲ್ಲಿ ನ್ಯಾಯಾಧೀಶ ಟಿ.ಹೆಚ್.ಎಂ. ಸದಾಶಿವಯ್ಯನವರು ಸ್ಥಾಪಿಸಿದ ಮಲ್ಲಸಜ್ಜನ ವ್ಯಾಯಾಮಶಾಲೆ ಸಹ ೧೯೩೫ರಲ್ಲಿ ಏಕೀಕರಣದ ಕೇಂದ್ರ ಬಿಂದುವಾಗಿತ್ತು. ಅಥಣಿಯ ಸಿದ್ಧೇಶ್ವರ ವಾಚನಲಯ ಉಲ್ಲೇಖನೀಯ. ಧಾರವಾಡದ ಮಲ್ಲಸಜ್ಜನ ವ್ಯಾಯಾಮ ಶಾಲೆ ಕೊಟ್ಟೂರಿನ ಭಾರತ ವ್ಯಾಯಮ ಶಾಲೆ, ಹುಬ್ಬಳ್ಳಿಯ ವಿದ್ಯಾರಣ್ಯ ವಾಚನಾಲಯ, ಬೆಂಗಳೂರಿನ ಅಮೆಚೂರ್ ಡ್ರ್ಯಾಮ್ಯಾಟಿಕ್ ಆಸೋಸಿಯೇಷನ್ ಇವೆಲ್ಲ ಏಕೀಕರಣಕ್ಕೆ ದುಡಿದ ರಾಷ್ಟ್ರೀಯ ಸಂಸ್ಥೆಗಳು.

೧೯೩೮ರಲ್ಲಿ ಬೆಂಗಳೂರಿನಲ್ಲಿ ಏಕೀಕರಣದ ಪರಿಷತ್ತಿನ ಕಾರ್ಯದರ್ಶಿಯಾಗಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಸೇವೆ ಮಾಡಿ ಗಡಿ ಪ್ರದೇಶಗಳಲ್ಲಿ ಕರ್ನಾಟಕದ ಪರ ಪ್ರಚಾರಾದಿಗಳನ್ನು ನಡೆಸಿತು, ಸ್ವತಂತ್ರ ಕರ್ನಾಟಕ ಪತ್ರಿಕೆ ಕೂಡ ಆರಂಭವಾಯಿತು.

೧೯೪೬ರ ಕೊನೆಗೆ ಬ್ರಿಟೀಷರು ಭಾರತವನ್ನು ಬಿಡುವ ಸಂಗತಿ ಖಚಿತವಾಗಿ ರಾಜ್ಯ ಘಟನಾ ಸಮಿತಿ ದೆಹಲಿಯಲ್ಲಿ ಸಭೆ ಸೇರಿತು. ಅದೇ ಕಾಲಕ್ಕೆ ಮುಂಬೈಯಲ್ಲಿ ನಡೆದ ಹತ್ತನೆಯ ಏಕೀಕರಣ ಸಮ್ಮೇಳನವು ಏಕೀಕರಣವನ್ನು ಒತ್ತಾಯಿಸಿತ್ತಲ್ಲದೆ ಮುಂಬೈಯ ಮಂತ್ರಿ ಎಂ.ಪಿ. ಪಾಟೀಲರ ಅಧ್ಯಕ್ಷತೆಯಲ್ಲಿ ದಾವಣಗೆರೆಯಲ್ಲಿ ನಡೆದ ಕರ್ನಾಟಕಸ್ಥರ ಮಹಾಸಭೆಯು ಏಕೀಕರಣದ ದಿಸೆಯಲ್ಲಿ ಕ್ರಮ ಕೈಗೊಳ್ಳಲು ಘಟನಾ ಸಮಿತಿಯನ್ನು ಒತ್ತಾಯಿಸಿತು. ಮುಂಬೈ ಹಾಗೂ ಮದ್ರಾಸ್ ವಿಧಾನಸಭೆಗಳು ೧೯೪೭ರಲ್ಲಿ ಏಕೀಕರಣವನ್ನು ಬೆಂಬಲಿಸಿ ಠರಾವು ಮಾಡಿದವು. ಕರ್ನಾಟಕ ಏಕೀಕರಣ ಮಹಾಸಮಿತಿಯನ್ನು ಎಸ್. ನಿಜಲಿಂಗಪ್ಪನವರು ಅಧ್ಯಕ್ಷರಾಗಿಯೂ ಅಂದಾನಪ್ಪ ದೊಡ್ಡಮೇಟಿ ಕಾರ್ಯದರ್ಶಿಗಳಾಗಿಯೂ ಸ್ಥಾಪಿಸಲಾಯಿತು.

೧೯೫೩ರಲ್ಲಿ ಬಳ್ಳಾರಿ ಜಿಲ್ಲೆ ಮೈಸೂರು ಸರ್ಕಾರಕ್ಕೆ ವಿಲೀನ ವಾಗಿತ್ತು. ಈ ಕೆಳಗಿನ ಪ್ರದೇಶಗಳನ್ನೊಳಗೊಂಡ ಏಕೀಕೃತ ಕರ್ನಾಟಕ ೧೯೫೬ರ ನವೆಂಬರ್ ೧ಕ್ಕೆ ಅಸ್ತಿತ್ವಕ್ಕೆ ಬಂತು. ಬಳ್ಳಾರಿ ಜಿಲ್ಲೆಯನ್ನು ಒಳಗೊಂಡ ಮೈಸೂರು, ಮುಂಬೈ ರಾಜ್ಯದಿಂದ ಕೆಳಕಂಡ ಪ್ರದೇಶಗಳು, ಚಂದಗಡ ತಾಲ್ಲೂಕು ಹೊರತು ಇಡೀ ಬೆಳಗಾವಿ ಜಿಲ್ಲೆ, ಇಡೀ ಧಾರವಾಡ, ವಿಜಾಪುರ ಉತ್ತರ ಕನ್ನಡ ಜಿಲ್ಲೆಗಳು, ಮದ್ರಾಸ್ ರಾಜ್ಯದಿಂದ ಕಾಸರಗೋಡು, ಹಾಗೂ ಅಮಿನ್‌ದೀವಿ ದ್ವೀಪಗಳ ಹೊರತು ಇಡೀ ದಕ್ಷಿಣ ಕನ್ನಡ ಜಿಲ್ಲೆ, ಕೊಯಮತ್ತೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕು, ಕೊಡಗು, ಕೋಡಂಗಲ್, ತಾಂಡೂರು ತಾಲ್ಲೂಕುಗಳ ಹೊರತು ಇಡೀ ಕಲ್ಬುರ್ಗಿ ಜಿಲ್ಲೆ, ಆಲಂಪುರ, ಗದ್ವಾಲ ತಾಲ್ಲೂಕುಗಳ ವಿನಾ ಇಡೀ ರಾಯಚೂರು ಜಿಲ್ಲೆ, ಬೀದರ್, ಭಾಲ್ಕಿ, ಔರಾದ್ ಹಾಗೂ ಹುಮ್ನಾಬಾದ್, ಈ ನಾಲ್ಕು ಬೀದರ್ ಜಿಲ್ಲೆಯ ತಾಲ್ಲೂಕುಗಳು, ನವ ಮೈಸೂರೆಂದು ಹೆಸರಿಸಲಾದ ಹೊಸ ರಾಜ್ಯಕ್ಕೆ ೧೯೭೩ರ ನವೆಂಬರ್ ೧ಕ್ಕೆ ಕರ್ನಾಟಕ ಎಂದು ಹೆಸರಿಡಲಾಯಿತು. ಆಗ ಇದ್ದ ೧೯ ಜಿಲ್ಲೆಗಳ ಬದಲಿಗೆ ಈಗ ೨೭ ಜಿಲ್ಲೆಗಳನ್ನು ರಚಿಸಿದೆ. ಉಡುಪಿ, ದಾವಣಗೆರೆ, ಗದಗ, ಹಾವೇರಿ, ಬೆಂಗಳೂರು (ನಗರ ಮತ್ತು ಗ್ರಾಮಾಂತರ), ಚಾಮರಾಜ ನಗರ, ಕೊಪ್ಪಳ ಹೊಸ ಜಿಲ್ಲೆಗಳು.

*

- ❖ ಕನ್ನಡವೇ ಸತ್ಯ, ಕನ್ನಡವೇ ನಿತ್ಯ
- ❖ ಬಾರಿಸು ಕನ್ನಡ ಡಿಂಡಿಮವ
  ಓ ಕರ್ನಾಟಕ ಹೃದಯಶಿವ
  -ಕುವೆಂಪು
- ❖ ಕನ್ನಡ ಉಳಿಸಿ, ಕನ್ನಡ ಬೆಳೆಸಿ,
  ಕನ್ನಡವನೆ ಬೆಳೆಸಿ -ಪು.ತಿ.ನಾ
- ❖ ಕರ್ನಾಟಕದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ
- ❖ ಕನ್ನಡವಾಗಲು ಉಸಿರು, ಬಾಳಲ್ಲಿ ಹಸಿರು
- ❖ ಹೆಸರಾಯಿತು ಕರ್ನಾಟಕ, ಉಸಿರಾಗಲಿ ಕನ್ನಡ

# ಪ್ರಾಣಿಕ್ ಹೀಲಿಂಗ್ (ಪ್ರಾಣ ಚಿಕಿತ್ಸೆ) –ಒಂದು ಸಂಪೂರ್ಣ ಯೋಗ

– ಜ್ಯೋತಿ ಬಿ.ಎಸ್. ಡಿಪಾರ್ಟ್‌ಮೆಂಟ್ ಆಫ್ ಯೋಗವಿದ್ಯಾಲಯ, ಪ್ರಾಣಿಕ್ ಹೀಲಿಂಗ್, ಎಂ.ಎಸ್. ರಾಮಯ್ಯ ಆಸ್ಪತ್ರೆ, ಬೆಂಗಳೂರು.

**ಆ**ರೋಗ್ಯ : ಆರು ಯೋಗ್ಯ ರೀತಿಯಲ್ಲಿ ಇರುವುದೇ ಆರೋಗ್ಯ. ಆರು ಎಂದರೆ ನಮ್ಮ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮತ್ಸರ ಇವುಗಳು ಸಮತೋಲನದಲ್ಲಿದ್ದರೆ ಮಾತ್ರ ನಾವು ದೈಹಿಕ, ಮಾನಸಿಕ, ಸಾಮಾಜಿಕ, ಆರ್ಥಿಕ ಮತ್ತು ಆಧ್ಯಾತ್ಮಿಕವಾಗಿ ಆರೋಗ್ಯದಿಂದಿರಲು ಸಾಧ್ಯ. ಇಂದಿನ ಆಧುನಿಕ ಯುಗದಲ್ಲಿ ಮಾನವನನ್ನು ಈ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಆಳುತ್ತಿವೆ. ಹೀಗಾಗಿ ಮನುಷ್ಯ ಅನೇಕ ದೈಹಿಕ, ಮಾನಸಿಕ ಖಾಯಿಲೆಗಳಿಂದ ನರಳುತ್ತಿದ್ದಾನೆ. ಇನ್ನು ಆಧ್ಯಾತ್ಮಿಕ ಉನ್ನತಿ/ ಆರೋಗ್ಯ ದೂರವೇ ಉಳಿಯಿತು. ಏಕೆಂದರೆ ದೈಹಿಕವಾಗಿ ಆರೋಗ್ಯವಾಗಿದ್ದರೆ ಮಾನಸಿಕವಾಗಿ ಆರೋಗ್ಯವಾಗಿರಲು ಸಾಧ್ಯ ಅಥವಾ ಮನಸ್ಸು ಆರೋಗ್ಯವಾಗಿದ್ದರೆ ದೇಹ ಸ್ವಸ್ಥವಾಗಿರುತ್ತದೆ. ಇವೆರಡೂ ಇದ್ದಾಗ ಮಾತ್ರ ಆಧ್ಯಾತ್ಮಿಕ ಸಾಧನೆ ಸಾಧ್ಯ. ಐಹಿಕ ಸುಖದ ಬೆನ್ನತ್ತಿ ಸಾಮಾಜಿಕವಾಗಿ ಹೆಸರು, ಉನ್ನತ ಪದವಿ, ಹಣವನ್ನು ಗಳಿಸಲು ಪ್ರಯತ್ನಿಸುತ್ತಾ ದೈಹಿಕ, ಮಾನಸಿಕ ತೊಂದರೆಗಳಿಗೆ ತುತ್ತಾಗುತ್ತಿದ್ದಾನೆ. ಅಸಹಜ ವರ್ತನೆಯಿಂದ ತನ್ನತನ ಕಳೆಸುಕೊಳ್ಳುತ್ತಿರುವುದಲ್ಲದೆ ತಾನು ಯಾರು? ತನ್ನಲ್ಲಿ ಯಾವ ಶಕ್ತಿ ಅಡಗಿದೆ ಎಂಬುದನ್ನು ಅರಿಯದೆ, ಅರಿಯಲು ಪ್ರಯತ್ನಿಸದೆ ಅನೇಕ ಗೊಂದಲ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಒದ್ದಾಡುತ್ತಿದ್ದಾನೆ. ದೇಹದ ಆರೋಗ್ಯ, ಮನಸ್ಸಿನ ಶಾಂತಿ ಪಡೆದುಕೊಳ್ಳಲು ನಾನಾ ರೀತಿಯ ಮಾರ್ಗಗಳನ್ನು ಅನುಸರಿಸಲು ಹವಣಿಸುತ್ತಿದ್ದಾನೆ. ಆಧ್ಯಾತ್ಮದ ಸಾಧನೆಯೇ ಪರಮಶಾಂತಿಯ ಮೂಲ ಎನ್ನುವುದನ್ನು ಅರಿಯಬೇಕು. ರೋಗ ನಿವಾರಣೆಗೆ ಅನೇಕ ರೀತಿಯ ಚಿಕಿತ್ಸಾ ಪದ್ಧತಿಯ ಮೊರೆ ಹೋಗುವವರಿಗೆ ಸುಲಭವಾದ ಮತ್ತು ವೈಜ್ಞಾನಿಕವಾದ ಮಾರ್ಗ 'ಪ್ರಾಣ ಚೈತನ್ಯ' ಚಿಕಿತ್ಸೆ ಅಥವಾ 'ಪ್ರಾಣಿಕ್ ಹೀಲಿಂಗ್' ಈ ಚಿಕಿತ್ಸೆಯಿಂದ ಖಾಯಿಲೆಗಳಿಂದ ಮುಕ್ತರಾಗಿ ಸ್ವಸ್ಥ ಮನಸ್ಸನ್ನು ಹೊಂದಿ ಆಧ್ಯಾತ್ಮ ಸಾಧನೆಗೈಯಲು ಸಹಕಾರಿಯಾಗಿದೆ.

**ಪ್ರಾಣಿಕ್/ಪ್ರಾಣ ಚೈತನ್ಯ ಚಿಕಿತ್ಸೆ :** ಪ್ರತಿ ಮಾನವನು ಎರಡು ವಿಧವಾದ, ಒಂದು ಒಳ ಮತ್ತು ಹೊರವಲಯಗಳನ್ನು (ಪ್ರಭಾವಲಯ/ AURA) ಹೊಂದಿ ತನ್ನ ಭೌತಿಕ ಶರಿರದ ರೂಪ ರೇಖೆಗಳನ್ನು ಹೋಲುವ, ತಾನು ವಾಸಿಸುವ ಮತ್ತು ಚಲಿಸುವ (ಜ್ಯೋತಿ ಶಕ್ತಿ ಕ್ಷೇತ್ರ)ವನ್ನು ಹೊಂದಿ ತನ್ನ ಸ್ಥಿತಿಯನ್ನು ಪಡೆದಿರುತ್ತಾನೆ. ಅವನ ಒಳ/ ಹೊರವಲಯದಲ್ಲಿ ಚೇತನ ಶಕ್ತಿಯ ಸೋರುವಿಕೆಯಿಂದ ರೋಗ ಪೀಡಿತನಾಗುತ್ತಾನೆ. ಪ್ರತಿ ಮಾನವನು ಚೈತನ್ಯ ಸ್ಫೂರ್ತಿಯಾಗಿರುವಾಗ ದೈಹಿಕವಾಗಿ ಬರುವ ಅನಾರೋಗ್ಯವನ್ನು ಚೈತನ್ಯರಸದಿಂದಲೇ ಪರಿಹರಿಸುವ ಪದ್ಧತಿಯೇ ಪ್ರಾಣ ಚೈತನ್ಯ ಚಿಕಿತ್ಸೆ. ಔಷಧಿ ರಹಿತ, ಸ್ಪರ್ಶ ರಹಿತ ಚಿಕಿತ್ಸೆಯೂ ಇದಾಗಿದೆ.

**ಪ್ರಾಣ :** ಭೌತಿಕ ಶರೀರವನ್ನು ಜೀವಂತವಾಗಿಯೂ, ಆರೋಗ್ಯಕರವಾಗಿಯೂ ನೋಡಿಕೊಳ್ಳುವ ಚೈತನ್ಯ ಸ್ವರೂಪವೇ ಪ್ರಾಣ. ನಮಗೆ ಬೇಕಾಗುವ ಪ್ರಧಾನ ಪ್ರಾಣ ಚೈತನ್ಯವೂ ಗಾಳಿಯ ಮೂಲಕ ದೊರೆಯುತ್ತದೆ. ನಮ್ಮ ಪ್ರತಿಯೊಂದು ಯೋಚನೆ, ದೈಹಿಕ ಚಟುವಟಿಕೆಗಳ ಮೂಲಕ ನಮ್ಮ ಪ್ರಾಣ ಚೈತನ್ಯವನ್ನು ಸತತವಾಗಿ ಕ್ಷೀಣವಾಗಿಸುತ್ತಾ ಇರುತ್ತವೆ. ಪ್ರಾಣಚೈತನ್ಯ ಚಿಕಿತ್ಸೆಯಿಂದ ಸಗೋಚರ ಮತ್ತು ಅಗೋಚರ ಶರೀರವನ್ನು ಪುನಃಶ್ಚೇತನಗೊಳಿಸಬಹುದು. ಸಗೋಚರ ಶರೀರ ಅಂದರೆ ಅನ್ನಮಯ ಕೋಶ ಮತ್ತು ಅಗೋಚರ ಎಂದರೆ ಪ್ರಾನಮಯಕೋಶ. ಈ ಎರಡೂ ಕೋಶಗಳನ್ನು ಚೈತನ್ಯಗೊಳಿಸುವುದರಿಂದ ಅನೇಕ ದೈಹಿಕ, ಮಾನಸಿಕ ಖಾಯಿಲೆಗಳಿಂದ ಮುಕ್ತರಾಗಬಹುದು. ಮುಖ್ಯವಾಗಿ ಸೌರಪ್ರಾಣ, ವಾಯುಪ್ರಾಣ ಮತ್ತು ಪೃಥ್ವಿಪ್ರಾಣ ಎಂಬ ಮೂರು ಬಗೆಗಳಿಂದ ಚೈತನ್ಯ ಪಡೆಯಬಹುದು.

ನಮ್ಮ ಭೌತಿಕ ಶರೀರದ ಸುತ್ತಲೂ ಪ್ರಕಾಶಮಾನವಾದ ಚೇತನ ಶರೀರವಿದೆ ಎಂದು ಪುರಾತನ ಕಾಲದಿಂದಲೂ ಬಂದಿರುವ ನಂಬಿಕೆ. ಇದನ್ನು ಕೋಶ/ಪ್ರಭಾವಲಯ ಎಂದೂ ಕರೆಯುತ್ತಾರೆ. ಸಗೋಚರ ಶರೀರ ಅನ್ನಮಯಕೋಶವಾದರೆ ಅಗೋಚರ ಶರೀರ ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಕೋಶಗಳಿಂದ ಆವೃತ್ತವಾಗಿದೆ. ಈ ಎಲ್ಲಾ ಕೋಶಗಳು ಸ್ವಸ್ಥ ಮತ್ತು ಚೈತನ್ಯಭರಿತವಾಗಿದ್ದರೆ ಮಾತ್ರ ನಾವು ಎಲ್ಲಾ ರೀತಿಯಿಂದಲೂ ಆರೋಗ್ಯದಿಂದಿರಲು ಸಾಧ್ಯ. ಈ ಪ್ರಭಾವಲಯವು ವ್ಯಕ್ತಿಗಳ ರೂಪ ಲಕ್ಷಣಗಳಲ್ಲಿ, ಆರೋಗ್ಯ, ಭಾವನೆಗಳು ಮತ್ತು ಆಧ್ಯಾತ್ಮಿಕ ವಿಚಾರಗಳಲ್ಲಿ ಬೇರೆ ಬೇರೆಯಾಗಿ ಗೋಚರಿಸುತ್ತದೆ. ಪ್ರಾಣಶಕ್ತಿಯ ಕೊರತೆಯಿಂದ ಪ್ರಭಾವಲಯ ಹಾನಿಗೊಳಗಾಗಿ ರೋಗಗಳು ಉಂಟಾಗುತ್ತವೆ. ರೋಗವು ಭೌತಿಕ ಶರೀರದಲ್ಲಿ ಗೋಚರವಾಗುವುದಕ್ಕೆ ಮುನ್ನ ಅದು ಪ್ರಾಣಮಯ ಶರೀರದಲ್ಲಿ ಉಲ್ಬಣಗೊಂಡಿರುತ್ತದೆ. ಭೌತಿಕ ಶರೀರದ ಸುತ್ತಲೂ ಆವರಿಸಿರುವ ಸ್ವಾಸ್ಥವಲಯವು ಕ್ರಿಮಿಗಳು ಮತ್ತು ರೋಗಾಣುಗಳಿಂದ ರಕ್ಷಿಸುವ ಕವಚವಾಗಿದೆ. ಮನುಷ್ಯನು ದುರ್ಬಲನಾಗಿದ್ದಲ್ಲಿ ಸ್ವಾಸ್ಥ್ಯ ವಲಯದ ತ್ಯಾಜ್ಯ ಕ್ರಿಮಿಗಳ ಹೊರಹಾಕುವ ಶಕ್ತಿ ಕ್ಷೀಣಿಸಿ ರೋಗಪೀಡಿತನಾಗುತ್ತಾನೆ. ಸ್ವಾಸ್ಥ್ಯ ಕಿರಣಗಳನ್ನು ರೋಗಾಣುಗಳಿಂದ ಬೇರ್ಪಡಿಸಿ ಚೇತನ ಗೊಳಿಸುವುದೇ ಚಿಕಿತ್ಸಾಕ್ರಮದ ಆಧಾರವಾಗಿದೆ.

**ಚಕ್ರ :** ಚಕ್ರಗಳು ಏಳು, ಸಹಸ್ರಾರ, ಆಜ್ಞಾ ವಿಶುದ್ಧಿ, ಅನಾಹತ, ಮಣಿಪೂರ, ಸ್ವಾಧಿಸ್ಟಾನ ಮತ್ತು ಮೂಲಾಧಾರ. ಈ ಸಪ್ತ ಚಕ್ರಗಳು ಸೂಕ್ಷ್ಮ ಶರೀರದ ಬಹಳ ಮುಖ್ಯವಾದ ಅಂಗಗಳು. ಒಂದು ಮನೆಯ ಕಿಟಕಿ, ಬಾಗಿಲುಗಳು ಬೆಳಕು, ಗಾಳಿ ಒಳ ಹೊರ ಹೋಗಲು ಸಹಕಾರಿಯಾಗಿರುವಂತೆ ಈ ಚಕ್ರಗಳು ದೇಹದ ಪ್ರತಿ ಅಂಗಗಳಿಗೂ ಜೀವ ಚೈತನ್ಯ ಸರಬರಾಜು ಮಾಡುತ್ತವೆ. ಇವುಗಳನ್ನು ಶಕ್ತಿ ಕೇಂದ್ರಗಳೆಂದೂ ಕರೆಯಬಹುದು. ಇವುಗಳು ಸರಿಯಾಗಿ ಕೆಲಸ ನಿರ್ವಹಿಸದಿದ್ದರೆ ಅಂಗಗಳು/ಶರೀರರೋಗ ಪೀಡಿತವಾಗುತ್ತವೆ. ನಮ್ಮ ದೇಶದ ನಿರ್ನಾಳಗ್ರಂಥಿಗಳನ್ನು ಈ ಚಕ್ರಗಳು ನಿಯಂತ್ರಿಸುತ್ತವೆ. ಈ ಚಕ್ರಗಳನ್ನು ಚುರುಕುಗೊಳಿಸಿ ಸೂಕ್ಷ್ಮ ಶರೀರದ ತೊಂದರೆಗಳನ್ನು ನಿವಾರಿಸಬಹುದು. ಪ್ರಾಣಮಯ ಶರೀರವು ಚಕ್ರಗಳ ಮುಖಾಂತರ ಭೌತಿಕ ಶರೀರ ಮತ್ತು ಅವುಗಳ ಭಾಗಗಳ ಚಟುವಟಿಕೆಗಳಿಗೆ ಕಾರಣವಾಗಿ ಮತ್ತು ತನ್ನ ಹತೋಟಿಯಲ್ಲಿಟ್ಟುಕೊಂಡಿದೆ. ಅನೇಕ ರೋಗಗಳು ಭಾಗಶಃ ಇಂತಹ ಚಕ್ರಗಳ ಕಾರ್ಯ ಕುಂಠಿತವಾಗುವುದರಿಂದ ಬರುತ್ತದೆ. ಪ್ರಾಣಮಯಕೋಶಕ್ಕೆ ಸಂಬಂಧಪಟ್ಟ ಅಂದರೆ ಋಣಾತ್ಮಕ ಭಾವನೆಗಳು ಅಡಚಣೆಗೊಳಗಾದ ನಾಡಿಗಳು ಪ್ರಾಣದ ಕೊರತೆ/ಒತ್ತಡ ಮತ್ತು ಚಕ್ರಗಳ ಕಾರ್ಯಭಂಗ ಮುಂತಾದುವು ರೋಗಗಳನ್ನು ತಿಳಿಯಲು ಅವುಗಳಿಗೆ ಕಾರಣವಾದ ಬಾಹ್ಯ ಮತ್ತು ಆಂತರಿಕ ಅಂಶಗಳು. ಬಾಹ್ಯ ಅಂಶಗಳು ಕ್ರಿಮಿಗಳು, ಆಹಾರ, ವ್ಯಾಯಾಮದ ಕೊರತೆ, ಉಸಿರಾಟದ ನ್ಯೂನತೆ ಇತ್ಯಾದಿ, ಅಧಿಕವಾಗಿ ಆಂತರಿಕ ಅಂಶಗಳು ಕೋಪ, ಉದ್ವೇಗ, ಖಿನ್ನತೆ, ನಿರುತ್ಸಾಹ ಇತ್ಯಾದಿ ರೋಗಗಳಿಗೆ ಹೆಚ್ಚಿನ ಕಾರಣಗಳಗಿವೆ. ಶುದ್ಧಿಗೊಳಿಸುವ ಮತ್ತು ಚೈತನ್ಯಗೊಳಿಸುವ ಎರಡು ತತ್ವಗಳನ್ನು ಈ ಚಿಕಿತ್ಸೆಯಲ್ಲಿ ಅನುಸರಿಸಲಾಗುತ್ತದೆ. ಈ ತತ್ವಗಳು ಶರೀರದ ಮೇಲೆ ಮುಖ್ಯವಾಗಿ ಪ್ರಭಾವ ಬೀರುತ್ತದೆ. ಶರೀರವು ಗಾಳಿಯಲ್ಲಿನ ಆಮ್ಲಜನಕ ತೆಗೆದುಕೊಂಡು ಇಂಗಾಲದ-ಡೈ-ಆಕ್ಸೈಡ್ ಹೊರಹಾಕುತ್ತದೆ. ಹಾಗೆ ವಿಸರ್ಜನಾಂಗಗಳ ಮೂಲಕ ತಾನು ತಾನೇ ಶುದ್ಧಗೊಂಡು ಸರಿಯಾದ ಆಹಾರ ಸೇವನೆಯಿಂದ ಚೈತನ್ಯಗೊಳ್ಳುತ್ತದೆ. ಇದೇ ರೀತಿ ಈ ಚಿಕಿತ್ಸೆಯಲ್ಲೂ ರೋಗಪೀಡಿತ ಚಕ್ರಗಳನ್ನು ಅಥವಾ ನಾಳಗಳಲ್ಲುಂಟಾದ ಅಡಚಣೆಯನ್ನು ತೆಗೆದುಹಾಕಿ ಶುದ್ಧೀಕರಿಸಿ ಮತ್ತು ಚೈತನ್ಯಗೊಳಿಸುವುದರಿಂದ ರೋಗಮುಕ್ತರಾಗಬಹುದು.

ಈ ಚಿಕಿತ್ಸೆಯ ಕಾರಣಕರ್ತ **ಮಾಸ್ಟರ್ ಚೋವಾ ಕೊಕ್ ಸುಯಿ. ಚೀನಾ ಮೂಲದ ಫಿಲಿಫೈನ್ಸ್‌ನ ಸಂಜಾತರಾದ ಇವರು ರಸಾಯನ ಶಾಸ್ತ್ರದ ಇಂಜಿನಿಯರು.** ಮೂಲತಃ ಈ ವಿಧಾನ ಭಾರತದ್ದಾದರೂ ಇಂದಿನ ಆಧುನಿಕ ಯುಗಕ್ಕೆ ವೈಜ್ಞಾನಿಕ ಹಿನ್ನಲೆ, ತಂತ್ರಜ್ಞಾನವನ್ನು ಅಳವಡಿಸಿ ಒಬ್ಬ ಸಾಮಾನ್ಯ ಮನುಷ್ಯನೂ ಈ ವಿದ್ಯೆ ಕಲಿತು ತನ್ನ ಅನಾರೋಗ್ಯವನ್ನು ತನ್ನ ಕೈಯಿಂದ ಗುಣಪಡಿಸಿಕೊಳ್ಳುವಂತ ಅತಿ ಸುಲಭ ವಿಧಾನದಿಂದ ಪ್ರಸ್ತುತಪಡಿಸಿದ್ದಾರೆ. ಈ ವಿಧಾನ ವನ್ನು ಯಾರು ಬೇಕಾದರೂ ಅತಿ ಕಡಿಮೆ ಅವಧಿಯಲ್ಲಿ ಕಲಿತು ಪರಿಣತಿ ಪಡೆಯಬಹುದಾಗಿದೆ. ನಮಗೆ ನಾವೇ ಚಿಕಿತ್ಸೆಯನ್ನು ಮಾಡಿಕೊಳ್ಳಬಹುದು ಅಲ್ಲದೇ ಇತರರ ತೊಂದರೆಗಳನ್ನು ನಿವಾರಿಸಬಹುದಾಗಿದೆ.

ಈ ವಿದ್ಯೆ ಕೇವಲ ದೈಹಿಕ ಖಾಯಿಲೆಗಳನ್ನು ಗುಣಪಡಿಸಲು/ಪಡಿಸಿಕೊಳ್ಳಲು ಸಹಕಾರಿಯಾಗಿರದೆ ಆಧ್ಯಾತ್ಮಿಕ ಉನ್ನತಿಗೆ ಎಲ್ಲಾ ರೀತಿಯಲ್ಲೂ ಸಹಾಯ ಮಾಡುತ್ತದೆ. ಈ ಚಿಕಿತ್ಸೆಯೂ ಒಂದು ಸಂಪೂರ್ಣ ಯೋಗವಾಗಿದೆ. ಇದರಲ್ಲಿ ಆಸನ(ವ್ಯಾಯಾಮ) ಪ್ರಾಣಾಯಾಮ, ಧ್ಯಾನ ಹೀಗೆ ಸಂಪೂರ್ಣ ಜೀವನಕ್ಕೆ ಸಹಕಾರಿಯಾದ ಅಂಶಗಳನ್ನು ಒಳಗೊಂಡಿದೆ. ಆಧ್ಯಾತ್ಮಿಕ ತತ್ವಗಳ ಪಾಲನೆಗಳನ್ನು ಅರಿಯಬಹುದಾಗಿದೆ. ವ್ಯಾಯಾಮ, ಪ್ರಾಣಾಯಾಮದಿಂದ ದೈಹಿಕ ತೊಂದರೆಗಳು ನಿವಾರಣೆಯಾದರೆ, ಧ್ಯಾನದಿಂದ ತನ್ನನ್ನು ತಾನು ಅರಿಯಲು, ಪರಮಶಾಂತಿಯನ್ನು ಪಡೆಯಲು ನಮ್ಮ ದಿನನಿತ್ಯದ ಜಂಜಾಟದಿಂದ ಮುಕ್ತರಾಗಿ ಸುಖಕರ, ಶಾಂತಿಮಯ ಜೀವನ ನಡೆಸಲು ಸಹಾಯಕವಾಗಿದೆ. ನಮ್ಮಲ್ಲಿರುವ ತ್ಯಾಗ, ಪ್ರೀತಿ, ದಯೆ, ಕರುಣೆ, ಸ್ನೇಹ ಮನುಷ್ಯತ್ವ ಇಂತಹ ಗುಣಗಳನ್ನು ಹೆಚ್ಚಾಗಿಸಿ ಸಂಬಂಧಗಳು ಸಾಮರಸ್ಯ ಹೊಂದಲು ಮತ್ತು ಇಂದಿನ ಓಟನ ಯುಗದ ಒತ್ತಡ, ಖಿನ್ನತೆಯನ್ನು ಹೊಡದೋಡಿಸಿ ಆನಂದದಿಂದ, ತೃಪ್ತ ಜೀವನ ನಡೆಸಬಹುದಾದ ಅನೇಕ ವಿಷಯಗಳನ್ನು, ಸಮಸ್ಯೆಗಳ ಪರಿಹಾರ ಮಾರ್ಗ ತಿಳಿಯುವ ಅನೇಕ ವಿಧಾನ ಗಳನ್ನು ತರಗತಿಗಳಲ್ಲಿ ತಿಳಿಸಿಕೊಡಲಾಗುತ್ತದೆ. ಪ್ರಾಣಿಕ್ ಚಿಕಿತ್ಸೆಯನ್ನು ಯಾವುದೇ ಇತರ ವೈದ್ಯಕೀಯ ಪದ್ಧತಿ ಅಂದರೆ ಅಲೋಪತಿ, ಹೋಮಿಯೋಪತಿ, ಆಯುರ್ವೇದ ಇಂತಹದವರೊಂದಿಗೆ ಉಪಯೋಗಿಸಬಹುದು. ಇದು ನಮ್ಮ ದೇಹದ ಪ್ರತಿರೋಧಕ ಶಕ್ತಿಯನ್ನು ಹೆಚ್ಚಿಸಿ ನಮ್ಮ ಗುಣ ಹೊಂದುವ ಕ್ರಿಯೆಯನ್ನು ವೃದ್ಧಿಗೊಳಿಸುತ್ತದೆ. ಇದು ಒಂದು ನೈಸರ್ಗಿಕ ಚಿಕಿತ್ಸೆಯಾಗಿರುವುದರಿಂದ ಯಾವುದೇ ಅಡ್ಡ ಪರಿಣಾಮಗಳಿರುವುದಿಲ್ಲ. ಮನಸ್ಸೇ ಎಲ್ಲದಕ್ಕೂ ಮೂಲ ಕಾರಣವಾದ್ದರಿಂದ. ಅನೇಕ ಖಾಯಿಲೆಗಳು ನಮ್ಮ ಋಣಾತ್ಮಕ ಯೋಚನೆಗಳಿಂದ ಬರುವಂತಹವುಗಳು, ಈ ಚಿಕಿತ್ಸೆ ಮೊದಲು ಪರಿಣಾಮ ಬೀರುವುದರಿಂದ ಮನಸ್ಸು ಶಾಂತವಾಗಿ ಸಮತೋಲನ ಸ್ಥಿತಿಯಲ್ಲಿ ಇರುತ್ತದೆ. ಇದರಿಂದ ನಮ್ಮ ಅನೇಕ ಸಮಸ್ಯೆಗಳಿಂದ ಪಾರಾಗಬಹುದು. ಮಾಸ್ಟರ್ ಚೋವಾ ರವರು ಈ ಚಿಕಿತ್ಸೆಯಲ್ಲಿ ಒಂದು ಹೊಸವಿಧಾನದ

ಧ್ಯಾನವನ್ನು ಅಳವಡಿಸಿದ್ದಾರೆ.

ಈ ಧ್ಯಾನವನ್ನು 'ಅವಳಿ ಹೃದಯಗಳ ಮೇಲಿನ ಧ್ಯಾನ' **(Twin heart meditation)** ಈ ಧ್ಯಾನದಲ್ಲಿ ವ್ಯಕ್ತಿ ಸಂಪೂರ್ಣ ಪೃಥ್ವಿಗೆ ಶುಭ ಹಾರೈಸಿ ಬ್ರಹ್ಮಾಂಡದಲ್ಲಿರತಕ್ಕಂತ ಪ್ರತಿಜೀವಿಗೂ ಆರೋಗ್ಯ, ಆನಂದ, ಶಾಂತಿ, ಸಂಪತ್ತು, ನೆಮ್ಮದಿ, ತೃಪ್ತಿ, ಕೀರ್ತಿ, ವಿಶ್ವಾಸ ಮೂಡಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತಾ ಹಾರೈಸುತ್ತಾನೆ. ಅಲ್ಲದೇ ತನಗಾಗದವರನ್ನು ಕ್ಷಮಿಸಿ, ತನ್ನಿಂದ ತೊಂದರೆ ನೋವುಂಟಾಗಿ ಜೀವಿಗಳಲ್ಲಿ ಕ್ಷಮೆಯಾಚಿಸುತ್ತಾನೆ. ಹೀಗೆ ಮಾಡುವುದರಿಂದ ದ್ವೇಷ, ಅಸೂಯೆ, ಕೋಪ ಉದ್ವೇಗಗಳು ದಿನ ದಿನ ಅವನಿಂದ ದೂರ ಸರಿಯುತ್ತವೆ. ಅವನಲ್ಲಿ ವಿಶ್ವಭ್ರಾತೃತ್ವ ಮೂಡಿ ಪ್ರೀತಿ ಸ್ನೇಹ ತನ್ನಂತೆ ಪರರ ಬಗೆಯುವ ಮನೋಭಾವ ಪ್ರತಿದಿನ ಈ ಧ್ಯಾನ ಮಾಡುವುದರಿಂದ ತಾನು ಬ್ರಹ್ಮಾಂಡದ ಒಂದು ಅಂಶ, (ಅಹಂ ಬ್ರಹ್ಮಾಸ್ಮಿ) ಎಂಬ ತತ್ವ ಅವನಿಗೆ ಅರ್ಥವಾಗುತ್ತಾ ಹೋಗಿ ಆತ್ಮಸಾಕ್ಷಾತ್ಕಾರ ಪಡೆಯುವ ಮಾರ್ಗದಲ್ಲಿ ನಡೆಯ ತೊಡಗುತ್ತಾನೆ.

ದೈವಿಕ ಪ್ರೀತಿ ಮತ್ತು ದಯಾಪರತೆಯನ್ನು ಅನುಭವಿಸಿ ಪ್ರತಿಯೊಬ್ಬ ವ್ಯಕ್ತಿ ಮತ್ತು ಪ್ರತಿಜೀವಿಯ ಜೊತೆಯಲ್ಲಿ ಇವುಗಳನ್ನು ಹಂಚಿಕೊಳ್ಳು ವುದರಿಂದ ಇದು ನಾವು ಪೃಥ್ವಿಗೆ ಸಲ್ಲಿಸುತ್ತಿರುವ ಒಂದು ಬಗೆಯ ಸೇವೆಯೂ ಆಗುತ್ತದೆ. ಯುಕ್ತ ಆಹಾರ, ವಿಹಾರ, ಯಮ- ನಿಮಯಗಳಾದ ಅಹಿಂಸೆ, ಸತ್ಯ, ಆಸ್ತೇಯ ಬ್ರಹ್ಮಚರ್ಯ, ಅಪರಿಗ್ರಹ, ಶೌಚ, ಸಂತೋಷ, ತಪ, ಸ್ವಾಧ್ಯಾಯ, ಈಶ್ವರ ಪ್ರಣಿಧಾನ ಇವುಗಳ ಪಾಲನೆ ಮತ್ತು ಪಾಲನೆಯಿಂದಾಗುವ ಉಪಯೋಗಗಳನ್ನು ತಿಳಿದು ಜೀವನ ವನ್ನು ಸುಖಮಯವಾಗಿಸಲು ಈ ವಿದ್ಯೆ ಸಹಕಾರಿ ಯಾಗಿದೆ. ಕಲಿಯುಗದಲ್ಲಿ ಜಗದ ಜಂಜಾಟ ಗಳಿಂದ ಮುಕ್ತರಾಗಿ ಸಾಧನೆ ಮಾಡಲು ಈ ವಿಧಾನ ಉಪಯುಕ್ತವಾಗಿದೆ. *

❖ ಕನ್ನಡಿಗರು ವಿನಯಕ್ಕಾಗಿ ಬಗ್ಗಿ
ನಡೆಯಬಹುದು, ಆದರೆ ರಿಕ್ತರಂತೆ
ಕುಗ್ಗಿ ನಡೆಯಬೇಕಾಗಿಲ್ಲ.

– ಕುವೆಂಪು

❖ ನಾವು ಕನ್ನಡಿಗರೆಂಬುದನ್ನು
ನಮ್ಮಲ್ಲನೇಕರು ಮರೆತಂತಿದೆ

–ಡಾ|| ವಿ.ಕೃ. ಗೋಕಾಕ್

❖ ಕರುಳೆಂಬ ಕುಡಿಗೆ, ಮಿಂಚನ್ನೆ ಮುಡಿಸಿ
ಹಚ್ಚೇವು ಕನ್ನಡ ದೀಪ

–ಗೋವಿಂದ ಪೈ

## ನಾಡಗೀತೆ

ಜಯ್ ಭಾರತ ಜನನಿಯ ತನುಜಾತೆ,
ಜಯಹೇ ಕರ್ನಾಟಕ ಮಾತೆ ! ಜಯ್ ಸುಂದರ
ನದಿವನಗಳ ನಾಡೆ, ಜಯ ಹೇ ರಸಋಷಿಗಳ
ಬೀಡೆ! ಭೂದೇವಿಯ ಮಕುಟದ ನವಮಣಿಯೆ,
ಗಂಧದ ಚಂದದ ಹೊನ್ನಿನ ಗಣಿಯೆ; ರಾಘವ
ಮಧುಸೂದನರವತರಿಸಿದ ಭಾರತ ಜನನಿಯ
ತನುಜಾತೆ, ಜಯ ಹೇ ಕರ್ನಾಟಕ ಮಾತೆ!

ಜನನಿಯ ಜೋಗುಳ ವೇದದ ಘೋಷ,
ಜನನಿಗೆ ಜೀವವು ನಿನ್ನಾವೇಶ. ಹಸುರಿನ ಜೀವವು
ನಿನ್ನಾವೇಶ. ಹಸುರಿನ ಗಿರಿಗಳ ಸಾಲೆ, ನಿನ್ನಯ
ಕೊರಳಿನ ಮಾಲೆಮ್ ಕಪಿಲ ಪತಂಜಲ ಗೌತಮ
ಜಿನನುತ ಭಾರತ ಜನನಿಯ ಜನನಿಯ ತನುಜಾತೆ,
ಜಯ ಹೇ ಕರ್ನಾಟಕ ಮಾತೆ !

ಶಂಕರ ರಾಮಾನುಜ ವಿದ್ಯಾರಣ್ಯ, ಬಸವೇಶ್ವರರ
ಮಧ್ವರ ದಿವ್ಯಾರಣ್ಯ, ರನ್ನ ಷಡಕ್ಷರಿ ಪೊನ್ನ, ಪಂಪ
ಲಕುಮಿಪತಿ ಜನ್ನ, ಕಬ್ಬಿಗರುದಿಸಿದ ಮಂಗಲಧಾಮ!
ಕವಿಕೋಗಿಲೆಗಳ ಪುಣ್ಯಾರಾಮ! ನಾನಕ
ರಾಮಾನಂದ ಕಬೀರರ ಭಾರತ ಜನನಿಯ
ತನುಜಾತೆ, ಜಯಹೇ ಕರ್ನಾಟಕ ಮಾತೆ !

ತೈಲಪ ಹೊಯ್ಸಳರಾಳಿದ ನಾಡೆ, ಡಂಕಣ ಜಕಣರ
ನೆಚ್ಚಿನ ಬಿಡೆ, ಕೃಷ್ಣ ಸ್ವರಾವತಿ ತುಂಗಾ ಕಾವೇರಿಯ
ವರರಂಗ! ಚೈತನ್ಯ ಪರಮಹಂಸ ವಿವೇಕರ
ಭಾರತ ಜನನಿಯ ತನುಜಾತೆ, ಜಯ ಹೇ
ಕರ್ನಾಟಕ ಮಾತೆ !

ಸರ್ವಜನಾಂಗದ ಶಾಂತಿಯ ತೋಟ,
ರಸಿಕರ ಕಂಗಳ ಸೆಳೆಯುವ ನೋಟ.
ಕ್ರೈಸ್ತ ಮುಸಲ್ಮಾನ, ಪಾರಸಿಕ ಜೈನರುದ್ಯಾನ,
ಜನಕನ ಹೋಲುವ ದೊರೆಗಳ ಧಾಮ, ಗಾಯಕ
ವೈಣಿಕರಾರಾಮ, ಕನ್ನಡ ನುಡಿ ಕುಡಿದಾಡುವ
ಗೇಹ, ಕನ್ನಡ ತಾಯಿಯ ಮಕ್ಕಳ ದೇಹ!

ಜಯ್ ಭಾರತ ಜನನಿಯ ತನುಜಾತೆ,
ಜಯ ಹೇ ಕರ್ನಾಟಕ ಮಾತೆ!
ಜಯ್ ಸುಂದರ ನದಿವನಗಳ ನಾಡೆ,
ಜಯ ಹೇ ರಸಋಷಿಗಳ ಬೀಡೆ.





## ಜೀವನ ದರ್ಶನ

–ಶಿ.ಬಿ. ಪುಣೇದ, ಮಹಾಂತೇಶನಗರ, ಬೆಳಗಾವಿ –೫೯೦ ೦೧೬.

ಜೀವನವೆಂದರೆ ನಾವು ಜೀವಿಸುವ ಅವಧಿಯ ವರೆಗಿನ ಲೆಕ್ಕಪತ್ರ, ಹುಟ್ಟಿನಿಂದ ಸಾಯುವವರೆಗಿನ ಆಗು ಹೋಗುಗಳ ಒಟ್ಟು ವಿವರ, ಸಾರಾಂಶ. ಈ ಆಗು ಹೋಗು ಗಳಿಗೆ ಬಳುವಳಿಯಾಗಿ ಬಂದವುಗಳು ಸುಖ ದುಃಖಗಳು. ಸರಿಯಾಗಿ ವಿಚಾರಿಸಿದರೆ ಈ ಸುಖ ದುಃಖಗಳು ಮನದ ವಿಕಾರದ ಪರಿಣಾಮಗಳು: ಅದಕ್ಕಾಗಿ ಶಿವ ಶರಣೆ ಅಕ್ಕ ಮಹಾದೇವಿ 'ನಾ ಹುಟ್ಟಿದಲ್ಲಿ ಸಂಸಾರ ಹುಟ್ಟಿತ್ತು. ಸಂಸಾರ ಹುಟ್ಟಿದಲ್ಲಿ ಆಶೆ ಹುಟ್ಟಿತ್ತು. ಆಶೆಯಿಂದ ಕೋಪ ತಾಪ ಹುಟ್ಟಿತ್ತು....' ಎಂದಳು.

ಹೀಗೆ ವಿಚಾರಿಸಿದರೆ ಈ ಜೀವನ ವೈಯಕ್ತಿಕವಾದದ್ದು. ಅದು ಕಾರಣ 'ಜೀವನ' ಎಂಬುದು ವೈಯಕ್ತಿಕ ಸೊತ್ತು. ಅವರವರ ಭಾವಕ್ಕೆ ಅವರವರ ತರಹ, ಕಾರಣ ಇದನ್ನು ಮತ್ತೊಬ್ಬರಿಗೆ ಪರಭಾರೆ ಮಾಡಲು, ಬರುವುದಿಲ್ಲ. 'ಹೆಂಡಿರು ಮಕ್ಕಳು ಹೆರವರೂ ಪ್ರಾಣಿ, ನೀ ಹೊಂಟ ನಿಂತಾಗ ಕಾಣೆ ದುಗ್ಗಾಣಿ ಎಂದು ಬೋಧಿಸಿ ಎಚ್ಚರಿಸಿದರು ಅನುಭಾವಿಗಳು. ಇನ್ನು ವ್ಯಕ್ತಿ, ವ್ಯಕ್ತಿಗಳ ಸಂಕುಲ ಒಂದು ಪಾಳೆ. ಈ ಪಾಳ್ಯೆಯ ಸಾರಾಸಾರ ನಡವಳಿಕೆಯೇ ಸಂಸ್ಕೃತಿ. ಒಬ್ಬರಿಂದ ಇನ್ನೊಬ್ಬರು ಕಲಿಯುವುದು ಕಲಿಸುವುದು ಅನುಕರಿಸುವುದು ಪದ್ಧತಿ. ಈ ರೂಢಿ ಇಡೀ ಪಾಳ್ಯೆಯಕ್ಕೆ ನೆಮ್ಮದಿ ನೀಡುವುದಾದರೆ ಅದು ಧರ್ಮವೆನಿಸುವುದು. ಇದು ಸಾಮಾನ್ಯವಾಗಿ ಸಮಾಜದಲ್ಲಿ ಕಂಡುಬರುವ ಅಂಶ. ಯಾವುದೇ ಪ್ರಾಣಿಯ ಸ್ವಭಾವ ಜನ್ಯ ನಡವಳಿಕೆಯೇ ಅದರ ಧರ್ಮ. ಪ್ರಾಣಿ ಮತ್ತೊಂದನ್ನು ಕೊಂದು ಹೊಟ್ಟೆ ಹೊರೆಯುವುದು ಅದರ ಧರ್ಮ ಕರ್ಮ. ನಾಗರೀಕತೆಯ ಗಂಧವಿಲ್ಲದಾಗ ಮಾನವ ಪ್ರಾಣಿಗಳ ಬೇಟೆಯಾಡುವುದು ತನ್ನ ಬದುಕಿಗಾಗಿ ಅನಿವಾರ್ಯವಿತ್ತು. ನಾಗರೀಕತೆ ಬೆಳೆದಂತೆ ಭೂಮಿಯನ್ನು ಸಾಗುವಳಿ ಮಾಡಿ ದವಸ ಧಾನ್ಯಗಳಿಂದ ಉಪಜೀವಿಸುವ ಕ್ರಮ ಬಂದಾಗ ಅದಕ್ಕೆ ಹೊಂದಿಕೊಳ್ಳುವುದು ಧರ್ಮ.

ಹಿಂದೆ ಪಂಕ್ತಿಯಲ್ಲಿ ಕುಳಿತು ಊಟಮಾಡುವ ಪದ್ಧತಿ ರೂಢಿಯಲ್ಲಿದ್ದು ಸಾರ್ವಜನಿಕವಾಗಿ ಮನ್ನಿಸಲ್ಪಟ್ಟಿತ್ತು. ಈಗ 'ಬಫೆ' ಪದ್ಧತಿ ಜಾರಿಯಲ್ಲಿದೆ. ಇದನ್ನು ಇತ್ತೀತ್ತಲಾಗಿ ಎಲ್ಲ ಧರ್ಮದ ಜನರು ಅನುಸರಿಸುತ್ತಿರುವುದನ್ನು ನಾವು ಕಾಣುತ್ತೇವೆ. ಇಲ್ಲಿ ಶ್ರಮ ಹಾಗೂ ಅವಧಿಯ ಉಳಿಕೆಯಾಗಿ ಕಂಡು, ಸರ್ವಮಾನ್ಯವಾಗುತ್ತಿದೆ, ವಾಗಬೇಕು. ಇದೇ ರೀತಿ 'ಯಾದಿಪರಶ್ಯಾದಿ' ಜನಪ್ರಿಯವಾಗುತ್ತಿದೆ. ಇದಕ್ಕೆ ಧರ್ಮದ ಚೌಕಟ್ಟು ಕಟ್ಟುವ ಕಾಲ ದೂರವಿಲ್ಲ. ಇದನ್ನು ಸಂಪ್ರದಾಯ ವಾದಿಗಳು ವಿರೋಧಿಸುವುದಾದರೆ ಅವರೇ ಅನಾಡಿ ಯಾಗುತ್ತಾರೆ. ಕಾಲಕ್ಕೆ ತಕ್ಕಂತೆ ಸಂಪ್ರದಾಯಗಳು ಅನುಕೂಲವಾಗಿ ಮಾರ್ಪಾಡಾಗಬೇಕು, ಆಗುತ್ತವೆ. ಎಲ್ಲರಿಗೂ ಹಿತವಾಗುವುದಾದರೆ ಅದು ಧರ್ಮ ಸಮ್ಮತವೆ!.

ಹೀಗೆ ಧರ್ಮಪದದ ಅರ್ಥದ ಪರಿಧಿ ಹೆಚ್ಚುತ್ತಾ ಹೋಗುತ್ತಿದೆ. ಭಾರತದಂತಹ ಜಿಜ್ಞಾಸುಗಳ ನಾಡಿನಲ್ಲಿ ಅದು ಎಲ್ಲೆ ಮೀರಿ ಹಬ್ಬಿದೆ. ಆದರೆ 'ಧರ್ಮ'ವನ್ನು ಒಟ್ಟಾಗಿ ವಿಚಾರಿಸಿದರೆ ಅದು ನೆಮ್ಮದಿಯ ಬದುಕನ್ನು ನೀಡಬೇಕು ಬದುಕುವ ರೀತಿ ನೀತಿಗಳನ್ನು ಕೊಡಬೇಕು, ಸುಖ ಶಾಂತಿಗಾಗಿ ಎಂಬುದು ಇತ್ಯರ್ಥವಾಗುತ್ತದೆ.

ಇನ್ನು ಭಾಷೆ ಇಲ್ಲವೆ ಮಾತು ಸಂಜ್ಞೆಯಿಂದ ಬೆಳೆದು ಶಬ್ದರೂಪ ತಾಳಿತು. ನಂತರ ಅದಕ್ಕೆ ವ್ಯಾಕರಣದ ಚೌಕಟ್ಟು ಕೂಡಿಸಲಾಯಿತು. ಅದರಂತೆ ಬದುಕಿಗಾಗಿ ಮಾನವನ ರೀತಿ ನೀತಿ, ನಡವಳಿಕೆಗಳು ಹುಟ್ಟಿದವು. ಇವುಗಳನ್ನು ಒಂದು ಚೌಕಟ್ಟಲ್ಲಿ ಕೂಡ್ರಿಸಿದಾಗ ಅದು ಧರ್ಮವೆನಿಸಿತು. ಅದಕ್ಕಾಗಿ ಧರ್ಮದ ಉಪದೇಶ ಸಾಕ್ಷಾತ್ ಪರಮಾತ್ಮನಿಂದ ಆಯಿತು ಎನ್ನುವುದು ಸಮಂಜಸವಾಗದು.

ಧರ್ಮವು ಮಾನವನ ನಡವಳಿಕೆಗಳಿಗೆ ಸಂಬಂಧ ಪಟ್ಟದ್ದು. ನಡವಳಿಕೆಗಳು ಸ್ವಭಾವವನ್ನು ಅವಲಂಬಿಸಿವೆ. ಮಾನವ ಪಂಚಭೂತಾತ್ಮಕ ದೇಹಧಾರಿಯಾಗಿದ್ದು ಬುದ್ಧಿ ಪ್ರಧಾನಿಯಾಗಿದ್ದಾನೆ. ಮಾನವ–ದೇಹದ ಸ್ವಭಾವವನ್ನು ನಾವು ಮೂರು ರೀತಿ ವಿಂಗಡಿಸಬಹುದು. ಸ್ಥೂಲ, ಸೂಕ್ಷ್ಮ, ಭಾವನಾತ್ಮಕವೆಂದು, ಯಾಂತ್ರಿಕವಾಗಿ ಲೋಕಾಭಿರಾಮ ವಾಗಿ ವ್ಯವಹರಿಸುವುದು ಸ್ಥೂಲವಾದರೆ, ವಿಚಾರ ಪ್ರಧಾನ ವಾದದ್ದು ಸೂಕ್ಷ್ಮ, 'ಉದ್ವೇಗವಾಗುವುದು ಭಾವನಾತ್ಮಕದಲ್ಲಿ. ಪಂಚಜ್ಞಾನೇಂದ್ರಿಗಳ ಸಹಾಯದಿಂದ ಪಂಚಕರ್ಮೇಂದ್ರಿಗಳ ದೇಹದ ಕಾರ್ಯ ಪೂರೈಸುವವ 'ಮನ' ವೆಂಬ ಯಾಂತ್ರಿಕ. ಮಾನವನ ಈ ಮನ (ಸ್ವಭಾವ) ಸತ್ವ– ರಜ –ತಮ ಗುಣಗಳಲ್ಲಿ ಸದಾ ಹರಿದಾಡುತ್ತಿರುತ್ತದೆ. ಸಾತ್ವಿಕ ಗುಣ ಅಳವಡಿಸುವದಕ್ಕೋಸ್ಕರ ಬಸವ ಪ್ರತಿಪಾದಿತ ಲಿಂಗವಂತ ಧರ್ಮ 'ಇಷ್ಟಲಿಂಗ'ದ ಆರಾಧನೆ ಮೂಲಕ ಮನ(ಸ್ವಭಾವ) ವನ್ನು ಹದ್ದುಬಸ್ತಿನಲ್ಲಿ ನಿಯಂತ್ರಿಸುವ ಕಲೆಯನ್ನು

ರೂಢಿಸುತ್ತಿದೆ. ಕಾರಣ ಈ ವ್ಯವಸ್ಥೆ ಇಡೀ ಮಾನವ ಕುಲಕ್ಕೆ ಯಾವ ತರಹದ ಭೇದ-ಭಾವವಿಲ್ಲದೆ ನೀಡಿದ್ದಕ್ಕಾಗಿ ವಿಶ್ವಧರ್ಮವೆಂದು ಗಣಿಸಲ್ಪಡುತ್ತದೆ.

ಧರ್ಮದ ಬಗ್ಗೆ ಚರ್ಚೆ ವಿಮರ್ಶೆ ಹೆಚ್ಚಿದಂತೆ ಜ್ಞಾನ ವೃದ್ಧಿಯಾಗಿ ತಲೆ ಬೆಳೆಯುತ್ತಿದೆಯೇ ವಿನಃ ಹೃದಯ ಬೆಳೆಯಲಾರದು. ಹೃದಯ ಬೆಳೆಯುವುದು ನಿರ್ಮಲ ಪ್ರೇಮದಿಂದ, ತೋರಿಕೆಯ ಪ್ರೀತಿಯಿಂದಲ್ಲ ಇಲ್ಲವೆ ಬುದ್ಧಿವಂತಿಕೆಯಿಂದಲ್ಲ. ಅದಕ್ಕಾಗಿ ಬಸವಾದಿ ಶಿವ ಶರಣರು ೧೨ನೆಯ ಶತಮಾನದಲ್ಲಿ ವೇದಾಗಮನಗಳನ್ನು ಓರೆಗೆ ಹಚ್ಚಿದರು. ಅದರಲ್ಲಿಯ ಅಪ್ಪಟವಾದುವುಗಳನ್ನೆಲ್ಲ ಪೋಣಿಸಿ ಹೆಣೆದರು. ವಚನಗಳಲ್ಲಿ ಅರಿವು-ಆಚಾರ-ಅನುಭಾವಗಳ ಮೂಸೆಯಲ್ಲಿ ಅದ್ದಿದರು. ನುಡಿದಂತೆ ನಡೆದು ಅನುಭಾವಕ್ಕೆ ವೇದಿಸಿದಂತೆ ವಚನಿಸಿದರು. ಅದಕ್ಕಾಗಿ ಅವು ಹೆಚ್ಚು ಪರಿಣಾಮಕಾರಿಯಾದುವು.

ಅವರು ಮಾನವನ ಸ್ವಭಾವದ ಇತಿ-ಮಿತಿಗಳನ್ನು ಪರಿಶೀಲಿಸಿದರು. ಮನವೇ ಎಲ್ಲ ಸುಖ-ದುಃಖಗಳಿಗೆ ಕಾರಣವೆಂದು ಕಂಡುಕೊಂಡರು. ವ್ಯಕ್ತಿಯ ಕಲ್ಯಾಣವೇ ಸಮಾಜದ ಕಲ್ಯಾಣವೆಂದು ತಿಳಿದು ವೈಯಕ್ತಿಕ ದೈವವಾದ 'ಇಷ್ಟಲಿಂಗ' ಎಂಬ ಹೊಚ್ಚ ಹೊಸ ಪರಿಕಲ್ಪನೆಯನ್ನು ಹುಟ್ಟು ಹಾಕಿದರು. ದೇವರ ನಿಲುವನ್ನು ಗುಡಿ ಗುಂಡಾರಗಳಲ್ಲಿ ಕಟ್ಟಿ ಹೊಟ್ಟೆ ಹೊರೆವ ಪೂಜಾರಿಗಳ ಕಿಮ್ಮತ್ತನ್ನು ಹೊರಗೆಳೆದರು. ಹುಟ್ಟುತ್ತಲೇ ಯಾವನು ಜಂಗಮ ನಾಗುವುದಿಲ್ಲ, ಬ್ರಾಹ್ಮಣನಾಗುವುದಿಲ್ಲ. ಎಲ್ಲರೂ ಹುಟ್ಟುವುದು ಹೊಲೆಯಲ್ಲಿ, ಹುಟ್ಟಿ ನಡೆ ನುಡಿ ಕಲಿತಾಗ ಧರ್ಮದ ರೀತಿ-ನೀತಿಗಳ ದೀಕ್ಷೆ ನಡೆಯುತ್ತದೆ, ನಡೆಯಬೇಕು. ಆಗ ಜಾತಿ ಎಂಬ ಭೂತ ಎಲ್ಲಿಂದ ಬಂತು, ಬರಬೇಕು, ವಿಚಾರಿಸಿರಿ!.

ಜಾತಿಯನ್ನು ಹುಟ್ಟಿಸಿದವರು ದೇವರಲ್ಲ. ಮಂಗಮತಿಯ ಮಾನವರು. ಕೋತಿ ಬುದ್ಧಿಯ ಮಾನವ ದೇವರಿಗೆ ತನಗೆ ಬೇಕಾದಂತೆ ಮಾನವಾಕೃತಿ ಸೃಷ್ಟಿಸಿದ. ಅಷ್ಟು ಸಾಲದೆ ದೇವರಿಗೆ ಪ್ರಾಣಿಗಳ ಮುಖವಾಡ ಹಾಕುವಲ್ಲಿ ಹೇಸಲಿಲ್ಲ. ಅವೇ ನರಸಿಂಹ, ವರಹ, ನಂದಿ, ಗಣಪತಿ ಇತ್ಯಾದಿ ಹೀಗೆ ಜನರಲ್ಲಿ ಭೀತಿ ಹುಟ್ಟಿಸಿ, ಮೂಢನಂಬಿಕೆ ಗಳನ್ನು ಹರಿಬಿಟ್ಟು ಪರಿಹಾರ ರೂಪದಲ್ಲಿ ಪೂಜೆ ಪುರಸ್ಕಾರಗಳ ನೆಪ ಒಡ್ಡಿ ಹಣ ಸುಲಿಗೆ ಮಾಡಿದರು, ಮಾಡುತ್ತಿದ್ದಾರೆ ಇದಕ್ಕೆ ಬಸವಾದಿ ಶಿವಶರಣರು ತಡೆಒಡ್ಡಿ ಎಲ್ಲರಿಗೂ ಸಮಾನವಾಗಿರುವಂತ ಹೊಸ ಧರ್ಮವನ್ನು ರೂಪಿಸಿದರು. ಬದುಕುವ ತಲೆಯನ್ನು ಅಮೂಲಾಗ್ರವಾಗಿ ರೂಪಿಸಿದರು.

ಅದಕ್ಕಾಗಿ ಪ್ರತಿಯೊಬ್ಬರು ಅಂದರೆ ಭಕ್ತರಿಂದ ಹಿಡಿದು ಜಂಗಮರವರೆಗೆ ಎಲ್ಲರೂ 'ಕಾಯಕ'ವನ್ನು ಮಾಡಲು ಕಡ್ಡಾಯ ಮಾಡಿದರು. 'ಕಾಯಕ'ವೆಂದರೆ ಸತ್ಯ ಶುದ್ಧ ನಿಷ್ಠೆಯಿಂದ ಗಳಿಸುವ ಕಲೆ. ವ್ಯಕ್ತಿ ಸಾಂಘಿಕ ಜೀವಿಯಾದ ಕಾರಣ ಸಮಷ್ಠಿಯ ಹಿತ ಕಾಪಾಡಲು 'ದಾಸೋಹ' ಎಂಬುದನ್ನು ರೂಢಿಸಿದರು. ದಾಸೋಹ ಎಂದರೆ 'ಕಾಯಕ'ದಿಂದ ಬಂದುದರಲ್ಲಿ ತನ್ನ ಸಮಾಜ ಬಾಂಧವರಲ್ಲಿ ಹಂಚಿ ಭೋಗಿಸುವ ಕ್ರಮ. ಆಗ ನಾನು, ನನ್ನದು ಎಂಬ ಹ್ಯಾವ, ಭಾವ ಹರಿದು 'ಅವ ನಮ್ಮವ' 'ಅವ ನಮ್ಮವ' ಭಾವ ಬೆಳೆದು ಸುಂದರ ಸಮಾಜ ಕಟ್ಟಲು ಸಾಧ್ಯವೆಂದು ಮಾಡಿ ತೋರಿಸಿಕೊಟ್ಟರು ೧೨ನೆಯ ಶತಮಾನದಲ್ಲಿ ಬಸವಾದಿ ಶಿವಶರಣರು.

ನೀತಿಯೇ ಧರ್ಮಕ್ಕೆ ಆಧಾರವೆಂದು ತಿಳಿದು ಪಂಚ ಆಚಾರಗಳನ್ನು ಬೋಧಿಸಿದರು. ನಿರಾಕಾರವಾದ ದೇವರನ್ನು ಇಷ್ಟಲಿಂಗದಲ್ಲಿ ನೆನೆದು ಅಂತರಾತ್ಮಕ್ಕೆ ನಿವೇದಿಸುವ ಕಲೆಯನ್ನು ರೂಪಿಸಿದರು. ಅದಕ್ಕೆ ಸನ್ನಡತೆ ಮುಖ್ಯವೆಂದು ಬಿಂಬಿಸಿದರು. ಎಲ್ಲರೂ ದೇವರ ಮಕ್ಕಳೆಂದು ಸಮಾನತೆ ಯನ್ನು ಬಿಂಬಿಸಿದರು. ಗಾಳಿ, ಬೆಳಕು, ನೀರು ಭಗವಂತನ ಪ್ರಸಾದವೆಂದು ತಿಳಿಸಿದರು. ಧರ್ಮಪಾಲನೆ ಯಲ್ಲಿ ದೃಢಸಂಕಲ್ಪಿಗಳಾಗಬೇಕೆಂದು ಕಡೆಗೆ ಶಿವತತ್ವದ ಭಾವ ಬೆಳೆಸಿ ವಿಶ್ವ ಭ್ರಾತೃತ್ವದ ಬೀಜ ಬಿತ್ತಿದರು. ಹೀಗೆ ಲಿಂಗವಂತ ಧರ್ಮ ಅನುಪಮವಾದುದು.

ಒಂದು ರೀತಿಯಲ್ಲಿ ಪ್ರಾಂಜಲವಾಗಿ ವಿಚಾರಿಸಿದರೆ ಮಾನವ ಮಾನವನಂತೆ ಬದುಕುವ ಕಲೆಯನ್ನು ಲಿಂಗವಂತ ಬಸವ ಧರ್ಮ ನಿರೂಪಿಸುತ್ತದೆ. ಅದಕ್ಕಾಗಿ ಜೀವನಕ್ಕೆ ಅತಿ ಅನಿವಾರ್ಯತೆಯ ನಡೆ ನುಡಿ ಕಲಿಸುವ ಬಸವಣ್ಣ ಪ್ರತಿಪಾದಿಸಿದ ಲಿಂಗವಂತ ಧರ್ಮ ನಿಜವಾಗಿಯೂ 'ಜೀವನ ದರ್ಶನ' ವೆನಿಸಿದೆ.

ಇಂದಿನ ವೈಜ್ಞಾನಿಕ ಯುಗದಲ್ಲಿ ತಪ್ಪು ತಿಳಿವಳಿಕೆ ಕೊಟ್ಟ ಹಿರಿಯರಿಂದ ಅಜ್ಞಾನಿ ಧರ್ಮಾಂಧರಿಂದ ನಮ್ಮ ಲಿಂಗವಂತ ಯುವ ಜನಾಂಗ ಧರ್ಮಲಂಡವಾಗಿ ಕಂಗಾಲಾಗಿ ದ್ದಾರೆ. ಅವರಿಗೆ ಯೋಗ್ಯ ಮಾರ್ಗದರ್ಶನ ಪ್ರಾಜ್ಞರಾದ ಸಮಾಜದ ಹಿತಚಿಂತಕರು ಬೀದಿಗಿಳಿದು ಬೋಧಿಸಿ ತಮ್ಮ ತೆಕ್ಕೆಯಲ್ಲಿ ಹೆಕ್ಕಿ ರಕ್ಷಿಸುವುದು ಎಲ್ಲ ಧರ್ಮಾಭಿಮಾನಿಗಳ ಧರ್ಮವಾಗಿದೆ, ಕರ್ತವ್ಯವಾಗಿದೆ. ಧರ್ಮ ರಕ್ಷಿಸಿದವರನ್ನು ರಕ್ಷಿಸುತ್ತದೆ. ತನ್ನ ತಾ ನರಿದರೆ ತಾನೇ ಗುರು ಅರಿವೇ ಗುರು, ಆಚಾರವೇ ಲಿಂಗ, ಅನುಭಾವವೇ ಜಂಗಮ, ತಿಳಿದು ನೋಡಿ! ಬೆಳಗಿನಿಂದಲೇ

*





## ಬಯಲಿನಿಂದ ಭಯ ದೂರ -ಆಕಾಶತತ್ವ

- ಮುಂದುವರೆದ ಭಾಗ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೪, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

*ಸೃಷ್ಟಿಗೆ ಮೂಲ ಬಯಲು ಅರ್ಥವಾಗದಿರೆ*
*ದಿಗಿಲು ಬಯಲೆಂದರೆ ಬರಿ ಸೊನ್ನೆ ಆರೋಗ್ಯ*
*ನಂಬಿಹುದು ಅದನ್ನೇ 'ಏನೋ ಬಿಡುತಿಹಿರಿ ಆಕಾಶ*
*ಪುರಾಣ ನಮಗೋ ಆಗಿಲ್ಲ ಇನ್ನೂ ರೋಗನಿಧಾನ'*
*ಅದನು ತಿಳಿಸಲೆಂದೇ ಈ ಪುಟ್ಟ ಪ್ರಯತ್ನ*
*'ತಾಳ್ಮೆ' ಎಂಬುದೇ ರೋಗಿಗಳಿಗೆ 'ರತ್ನ'*
*ಆಕಾಶ ತತ್ವ ಬಹಳ ಹಗುರತ್ವ ತಿಳಿದರದ ಮಹತ್ವ*
*ಮೂಡುವುದು ಗುರುತ್ವ ಇಲ್ಲದಿರೆ ಆಕಾಶ ಬರೀ ಶೂನ್ಯ*
*ಅದಕೆ ಜ್ಞಾನ ಸೇರಿದರೆ ಆಗುವೆ ಧನ್ಯ.*

ಪರಮಾತ್ಮನಿಂದ ಪ್ರಾರಂಭವಾದ ಸೃಷ್ಟಿ, ಪ್ರಕೃತಿಯ ಮುಖಾಂತರ ಪ್ರಕಟವಾಯಿತು. ಪ್ರಕೃತಿಯ ಮುಖ್ಯವಾದ ಎಂಟು ತತ್ವಗಳಲ್ಲಿ ಆಕಾಶವೇ ಮೊದಲನೆಯದು. ನಾವು ಒಂದು ಮನೆಯನ್ನು ಕಟ್ಟಲು ಯೋಚಿಸುತ್ತೇವೆನ್ನಿ. ನಮ್ಮ ಮೊದಲ ಕೆಲಸವೇನು? ಜಾಗವನ್ನು ಹುಡುಕುವುದು ತಾನೇ? ಸೈಟು ಸಿಕ್ಕಿದರಲ್ಲವೇ ಮುಂದಿನ ಯೋಜನೆ. ಹಾಗೆಯೇ ಪರಮಾತ್ಮ ಸೃಷ್ಟಿಯ ಯೋಜನೆಯನ್ನು ಹಾಕಿಕೊಂಡಾಗ ಮೊದಲು ಸೃಷ್ಟಿಸಿದ್ದೇ ಈ ಆಕಾಶ. ಈ ತತ್ವವನ್ನೇ ಆಯುರ್ವೇದವೂ ಮಾನ್ಯ ಮಾಡಿದೆ. ಅದರ ಚಿಂತನೆಯನ್ನು ಅವಲೋಕಿಸುವ.

**ಆಯುರ್ವೇದದಲ್ಲಿ ಆಕಾಶ :**

*ನಾಭಸಂ ಸೂಕ್ಷ್ಮ ವಿಶದ ಲಘುಶಬ್ದಗುಣೋಲ್ಬಣಂ ।*
*ಸೌಷಿರ್ಯ ಲಾಘವಕರಂ ॥*
*-ಅಷ್ಟಾಂಗ ಹೃದಯ*

ಯಾವ ವಸ್ತುವಿನಲ್ಲಿ ಸೂಕ್ಷ್ಮತೆ, ಹರಡುವ ಗುಣ (ವಿಶದತೆ), ಹಗುರತನ (ಲಘುತ್ವ) ಕಡೆಯದಾಗಿ ಶಬ್ದ, ಈ ಗುಣಗಳಿರುವುದೋ ಅದರ ಹೆಸರು ನಾಭಸ. ಅದರ ಸೇವನೆ ಯಿಂದ ಶರೀರ ಮತ್ತು ಮನಸ್ಸುಗಳಲ್ಲಿ ರಂಧ್ರಗಳು (ಸೌಷಿರ್ಯ) ಮತ್ತು ಹಗುರತನ ಉಂಟಾಗುವುದು. ನಾವು ಆರೋಗ್ಯ ವಾಗಿರಲು ಹಾಗೂ ನಿರೋಗಿಯಾಗಲು ಮೇಲಿನ ಎಲ್ಲಾ ಗುಣಗಳನ್ನೂ ಒಳಗೊಂಡ ಆಕಾಶತತ್ವವನ್ನು ಆಹಾರವಾಗಿ ಬಳಸಿಕೊಳ್ಳಬೇಕು. ಅದನ್ನು ಆಹಾರವಾಗಿ ಬಳಸಿಕೊಳ್ಳುವುದು ಹೇಗೆ? ಅದನ್ನು ಆಹಾರವಾಗಿ ಉಪಯೋಗಿಸುವುದೆಂದರೆ ದಿನದ ಬಹಳಷ್ಟು ವೇಳೆ ಬಯಲಿನಲ್ಲಿ ವಾಸಿಸುವುದು. ರಾತ್ರಿಯ ವೇಳೆ ಬಯಲಿನಲ್ಲಿ ಮಲಗುವುದು. ತಲೆಯ ಮೇಲೆ ಒಂದು ಸೂರಿದ್ದರೆ ಸಾಕು. ಮಹಾತ್ಮಾಜಿಯವರು ವರಾಂಡದಂತಹ ಜಾಗದಲ್ಲಿಯೇ ಮಲಗುತ್ತಿದ್ದುದು, ಈಗಲೂ ರೈತರು ಹೊಲಗಳಲ್ಲಿ ಮಲಗುತ್ತಾರೆ. ಇದು ಒಳ್ಳೆಯ ಅಭ್ಯಾಸ. ಬಯಲಿನಲ್ಲಿ ವಾಸಿಸಿದರೆ ಅದನ್ನು ಉಪಯೋಗಿಸಿಕೊಂಡಂತೆ.

ಆಕಾಶತತ್ವದ ಮತ್ತೊಂದು ಗುಣ ಶಬ್ದ. ಅದನ್ನು ಆಹಾರವಾಗಿ ಬಳಸುವುದೆಂದರೆ ವೇದಘೋಷ ಮಾಡುವುದು, ಸಂಗೀತ ಹೇಳುವುದು ಅಥವಾ ಇವುಗಳನ್ನು ಕೇಳುವುದು. ಇವೆಲ್ಲಾ ಆರೋಗ್ಯದಲ್ಲಿ ಆಕಾಶತತ್ವದ ಬಳಕೆ. ಇನ್ನು ರೋಗದಲ್ಲಿ ಹೇಗೆ? ಕಾಡಿನಲ್ಲಿ ಜಿಂಕೆಯೊಂದು ಹುಲಿಗೆ ಹೆದರಿ ಓಡುತ್ತಿತ್ತು, ಎಡವಿ ಬಿತ್ತು. ಹುಲಿಯಿಂದ ತಪ್ಪಿಸಿಕೊಂಡಿತು. ಆದರೆ ಕಾಲಿಗೆ ಗಾಯವಾಯಿತು. ಆಗ ಅದು ಏನು ಮಾಡುತ್ತದೆ. ಯಾವುದಾದರೊಂದು ತೊಂದರೆ ರಹಿತ ಜಾಗಕ್ಕೆ ಹೋಗಿ ಮಲಗುತ್ತದೆ. ಮೊದಲ ಕೆಲಸ ಆಹಾರವನ್ನು ಬಿಡುವುದು, ನಾವು ಸಾಕುವ ಹಸು, ನಾಯಿ, ಇತ್ಯಾದಿಗಳಿಗೆ ಏನೋ ಕಾಯಿಲೆಯಾಗಿದೆ. ಅವು ಮಾಡುವ ಮೊದಲ ಕೆಲಸವೇನು? -ಉಪವಾಸ. ಒಂದು ವರ್ಷದೊಳಗಿನ ಮಗುವಿಗೆ ಜ್ವರ ಬಂದಿದೆ. ಅದರ ಮೊದಲ ಕಾರ್ಯಕ್ರಮವೇನು? ಆಹಾರ ಸೇವನೆಯನ್ನು ನಿಲ್ಲಿಸುವುದು. ಯಾಕೆ ಹಾಗೆ? ಅವುಗಳ ಪ್ರಜ್ಞೆಯೇ ಹಾಗೆ ಮಾಡಲು ಪ್ರಚೋದಿಸುತ್ತದೆ. ಆದರೆ, ಅದಕ್ಕೆ 'ಆಕಾಶತತ್ವ'ದ ಬಗ್ಗೆ ಅರಿವಿಲ್ಲ. ಉಪವಾಸವು ಆಕಾಶತತ್ವದ ಔಷಧಿಯ ಗುಣವನ್ನು ಪ್ರತಿಪಾದಿಸುತ್ತದೆ. ಸೃಷ್ಟಿ ತಯಾರಿಸಿರುವ ಮೊದಲನೆಯ ಔಷಧಿ - ಉಪವಾಸ. ಅದಕ್ಕಾಗಿಯೇ ಆಯುರ್ವೇದದ ಹೇಳಿಕೆ -*'ಲಂಘನಂ ಪರಮೌಷಧಮ್'*.

*ಮಿಕ್ಕೆಲ್ಲ ಔಷಧಗಳೂ ನಮ್ಮ ತಯಾರಿ*
*'ಉಪವಾಸ' -ಪ್ರಕೃತಿ ಅದರ ರೂವಾರಿ ಅದಕಾಗಿ ಅದಕೆ*
*ಕೊಡಬೇಕಿತ್ತು ಮೊದಲ ಜಾಗ ಹಾಗೆ*
*ಮಾಡದಿದ್ದುದರಿಂದಲೇ ಇಷ್ಟೊಂದು ರೋಗ*
*ಉಪವಾಸವೆಂದೊಡನೆ ಗ್ಯಾಸ್ಟ್ರಿಕ್ಕಿನಾ ಭೀತಿ ಆದರೆ ಎಲ್ಲ*

*ಧರ್ಮಗಳೂ ಹೊಗಳಿವೆ ಉಪವಾಸವನು ನಾನಾ ರೀತಿ*
*ಏಕೆ ಬಂದಿಹುದು ಈಚೆಗೆ ಈ ಭಯ ಅದಕೆ ಕಾರಣ*
*ನಾವು ತಬ್ಬಿರುವ ಅಜ್ಞಾನದ ಆಶ್ರಯ ಹುಟ್ಟಿದ ತಕ್ಷಣ*
*ಹೊಟ್ಟೆಯ ಕಡೆಗೇ ಗಮನ*
ಸಾಯುವಾವರೆಗೂ ನಿಲ್ಲದು ಅದಕೆ ನಮ್ಮ ನಮನ
ನೀಡು ಎಂದರೆ ಕೊಂಚ ವಿರಾಮ
ಭಯ! ಎಲ್ಲಿ ಬಂದುಬಿಡುವನೋ ಯಮ
ಅದರಿಂದ ಪ್ರಾರಂಭವಾಯ್ತು ಮಂಗಗಳ ಉಪವಾಸ
ಅದನು ತಿಳಿದು ಉಪ್ಪಿಟ್ಟೂ ಮಾಡಿತು ಅದರ ಸಹವಾಸ
ನಾನೇಕೆ ಬೇಡವೆಂದಿತು ತಂಬಿಟ್ಟು ಇದೇ ಉಪವಾಸಿಗಳ
ಈಗಿನಾ ಗುಟ್ಟೂ,
ಎಲ್ಲವೂ ನಡೆಯುವುದು ಏಕಾದಶಿಯಂದು, ಅನ್ನ
ಒಂದನು ಬಿಟ್ಟು
'ಟೈಂ ಟೈಂಗೆ ಹಾಕದಿದ್ದರೆ ಹೊಟ್ಟೆಗೆ ಶರೀರಕೆ
ಗ್ಯಾಸ್ಟ್ರಿಕ್ಕಿನಾ ಕೊಡುಗೆ' ಇದು ಇಂದಿನ ಹೇಳಿಕೆ
ಕಾರಣ, ಆಹಾರ- ಶಕ್ತಿಯ ಮೂಲ ಎಂಬ ನಂಬಿಕೆ
ಅದಕೆ ಜ್ವರ ಬಂದಾಗಲೂ ತುಂಬಲೇಬೇಕಂತೆ ಹೊಟ್ಟೆಗೆ
ಆಹಾರವೇ ಇಲ್ಲದಿರೆ ಶಕ್ತಿ ಎಲ್ಲಿ ರಟ್ಟೆಗೆ?
ಮಂಗನಂತಹ ಮನಸಿಗಿನ್ನೇನು ಬೇಕು ಪರ್ಮಿಟ್ಟು
ಅರ್ಥಮಾಡಿಕೊಂಡಿತು ಉಪವಾಸಕಿಂತ ಉತ್ತಮ
ಉಪ್ಪಿಟ್ಟು ರೋಗಿ ಬಯಸಿದ್ದು ಅದೇ ವೈದ್ಯ ಹೇಳಿದ್ದೂ
ಅದೇ, ಹೀಗಾಗಿ ಸದಾ ನಡೆಯುತ್ತಿದೆ ಹೊಟ್ಟೆಯಾ
ಪೂಜೆ ಅದರಿಂದ ಕೊಟ್ಟೆವು ಉಪವಾಸಕೆ
ಎಂದೋ ರಜೆ.
ಶರೀರದಲಿಹುದು ಅನೇಕ ಬಗೆಯ ಶಕ್ತಿ, ಇವುಗಳೆಲ್ಲದರ
ಮೂಲ 'ಜೀವಶಕ್ತಿ' ಅದು ಕುಂದಿದರೆ 'ಆಹಾರ'
ಶರೀರಕೆ ಹೊರೆ ನಾವೆಷ್ಟು ಹೊಕ್ಕರೂ ಇಲ್ಲ
ಆಹಾರದಾ ಮೊರೆ
ನಾವು ತಿನ್ನುವ ಆಹಾರ ಬರೀ ಭೌತಿಕ
ಆದರೆ, ಜೀವ ಅದರ ಸಹಾಯಕ. ಆಗ ಮಾತ್ರ ಶರೀರಕೆ
ಬರುವುದು ಶಕ್ತಿ ಇಲ್ಲದಿರೆ ಎಷ್ಟು ತಿಂದರೂ ನಿಶ್ಶಕ್ತಿ
ಭೌತಿಕ ಆಹಾರ ಪಂಚೇಂದ್ರಿಯಗಳ ವಶ
ಆದರೆ ಜೀವಶಕ್ತಿಯದು ವಿಶ್ವಶಕ್ತಿಯ ದಿಶ
ಆದ್ದರಿಂದ ಆಗಿಹುದು ಈ ಕಳವಳ
ಭೌತಿಕ ಚಿಂತನೆಯಿಂದ ತಪ್ಪಿಸಲದನು ಅಸದಳ
ತೆಗೆದುಕೊಂಡರೆ ವೇದಾಂತದಾ ಸಹಾಯ
ಅದೇ ಉತ್ತಮ ಉಪಾಯ ಈಚೆಗೆ ಆಧುನಿಕ
ವಿಜ್ಞಾನವೂ ಹಿಡಿಯುತಿಹುದು ಅದೇ ದಿಕ್ಕು
ಸತ್ಯವು ಆಗಿಹುದು 'ಒಂದೇ', ಅದಕೆ ಹಿಡಿಯುವುದುಲ್ಲ
ಎಂದಿಗೂ ತುಕ್ಕು.

-ಮುಂದುವರೆಯುತ್ತದೆ

## ಕನ್ನಡ ನಾಡ ರಾಣಿ

ಏಳು ಶೂರರ ಖಣೀ ಏಳು ಶೂರರ ರಾಣಿ
ಏಳು ತೀರದ ವೀರರಸದ ವಾಣಿ
ಏಳಿ ಮೀರಿದ ಜಾನಿ ಏಳು ಈ ಸ್ಥಿತಿಗಾಣಿ
ಏಳು ವರ ವರದ ಪಾಣಿ.

ಶೂರ ಪುರುಷರ ಕೊನೆಯು ವೀರ ಕವಿಗಳ
ಗೊನೆಯು, ಭೀರುತನವೆಂಬ ಶಲ್ಯಕ್ಕೆ
ಮೊನೆಯು ಧೀರಸತಿಯರ ತೆನೆಯು
ವೀರರಸಗಳ ಸೊನೆಯು,
ಈ ರೀತಿ ನಿನ್ನ ಮನೆಯು.

ಭರೆದೆ ಬೆಳೆಯುವ ಬೆಳೆಯು ತ್ವರದೆ
ಹರಿಯುವ ಹೊಳೆಯು
ಇರದೆ ಪ್ರತಿಕಾಲಕ್ಕೆ ಬರುವ ಮಳೆಯು
ವರಲಕ್ಷಣದ ಕಳೆಯು ಸುರರ ಸೀಮೆಯ
ಬೆಳೆಯು ಇರುವಂಥ ನಿನ್ನ ಇಳೆಯು.

ಸತ್ತಿರುವುದೆಸೇರು ಸುತ್ತಿರುವ ವಿಷ ಹೀರು
ಬತ್ತಿರುವುದಮೃತ ಝುರಿ ಮತ್ತೆ ತೋರು
ಸತ್ತುಳ್ಳ ನೂರಾರು ಬಿತ್ತುಗಳ ನೀನೂರು
ಕಿತ್ತು ಭಯಬಿಟ್ಟ ಬೇರು.

ಅಂದಿನಂತಹ ಧನವು ಅಂದಿನಂತಹ ತನುವು
ಅಂದಿನಂತವರ ಹಿರಿದಾದ ಮನವು
ಅಂದಿನನವು ಚಂದದಾಟಕೆ ಅನುವು
ಎಂದು ತಂದೀತು ದಿನವು!

ನೀನು ನೆಲೆಸಿದ ಕಾಡು ಮಾನಿಸುವರಾ
ಧ್ಯಾನಿಸುವರಾ ನಿನ್ನ ಹಾಡಿ ಹಾಡು
ಈ ನಾಡಿನೋಳು ಮಾಡು ಪ್ರಾಣಪುತ್ರರ
ಬೀಡು ಏನು ನಂದನದ ಪಾಡು

-ವರಕವಿ ದ.ರಾ. ಬೇಂದ್ರೆ.

❖ ಕನ್ನಡ ನಾಡಿಗೆ, ಕನ್ನಡವೇ ಗತಿ
ಅನ್ಯಥಾ ಶರಣಂ ನಾಸ್ತಿ
ಸಂಸ್ಕೃತವಲ್ಲ, ಇಂಗ್ಲೀಷಲ್ಲ,
ಹಿಂದಿಯಲ್ಲ, ಕನ್ನಡ

- ಬಿ.ಎಂ. ಶ್ರೀ





ಶ್ರೀಮಠದ ಹಳೆಯ ವಿದ್ಯಾರ್ಥಿಗಳಾದ ರಾಷ್ಟ್ರಕವಿ ಎಂದು ಪುರಸ್ಕೃತರಾದ, ಸರಳ, ಸಜ್ಜನಿಕೆಯ ಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ದಿನಾಂಕ ೦೪-೧೧-೨೦೬ರಂದು ಸ್ವಾಮೀಜಿಯವರ ದರ್ಶನಾಶೀರ್ವಾದ ಪಡೆಯಲು ಆಗಮಿಸಿದ್ದರು.

ಸನ್ಮಾನ್ಯ ಶ್ರೀ ಜಿ.ಎಸ್.ಎಸ್. ರವರು ೧೯೪೧ರಿಂದ ಐದು ವರ್ಷಗಳ ಕಾಲ ಪ್ರೌಢಶಾಲೆ ಮತ್ತು ಇಂಟರ್‌ಮೀಡಿಯೆಟ್ ಓದುವುದಕ್ಕೆ ಶ್ರೀಮಠದಲ್ಲಿ ನನಗೆ ಆಶನ ವಶನವನಿತ್ತು, ಅವರ ಅವರ ಕಾರುಣ್ಯಗಂಗೆಯನ್ನು ಹರಿಸಿ, ಹರಸಿ ಪೋಷಿಸಿದರು. ಅಂದು ಸ್ವಾತಂತ್ರ್ಯ ಹೋರಾಟ ತೀವ್ರವಾಗಿದ್ದ ಕಾಲ, ಅಧ್ಯಯನಕ್ಕೆ ಎಲ್ಲಿಯೂ ಅವಕಾಶವಿರಲಿಲ್ಲ. ಅಂದು ಶ್ರೀಮಠ ನನಗೆ ಆಶ್ರಯವಿತ್ತು ನೀರೆರೆದು ಪೋಷಿಸದಿದ್ದರೆ ನನಗೆ ಗೌರವ ಪದವಿಗಳು ಸಿಗುತ್ತಿರಲಿಲ್ಲ. ನನಗೆ ಸಿಕ್ಕಿರುವ ಪದವಿ ಗೌರವಗಳೆಲ್ಲ ಪೂಜ್ಯರ ಆಶೀರ್ವಾದದ ಫಲ, ಶ್ರೀಮಠದಲ್ಲಿದ್ದಾಗ ಗುರುಗಳ ಬೆತ್ತದ ರುಚಿಯನ್ನು ಕಂಡವನು. ಅಂದು ನಾಲ್ಕು ನೂರು ವಿದ್ಯಾರ್ಥಿಗಳಿದ್ದೆವು, ಎರಡು ಹೊತ್ತು ಹೊಟ್ಟೆ ತುಂಬಾ ಊಟ, ಹಬ್ಬಗಳಲ್ಲಿ ಸಿಹಿ ಊಟ, ತಾವೇ ತಮ್ಮ ಕೈಯಾರ ಬಡಿಸುತ್ತಿದ್ದರು. ಪೂಜ್ಯರು ಕಠಿಣ ಕಷ್ಟ ಕಾಯಕ ಮಾಡಿ ಈ ಮಠವನ್ನು ಬೆಳೆಸಿದ್ದಾರೆ, ನನ್ನಂತಹ ಲಕ್ಷಾಂತರ ಮಕ್ಕಳಿಗೆ ಎಣ್ಣೆ ಬತ್ತಿಯ ನೆರೆದು ಪೋಷಿಸಿದ್ದಾರೆ, ಗುರುಗಳು ಬುದ್ಧ, ಬಸವರ ತತ್ವಗಳನ್ನು ಸಾಕಾರಗಳಿಸಿಕೊಂಡವರು ಎಂದು ಪೂಜ್ಯರ ಬಗ್ಗೆ, ಶ್ರೀಮಠದ ಬಗ್ಗೆ, ಪತ್ರಕರ್ತರ ಮುಂದೆ ಅಭಿಮಾನದ ನುಡಿಗಳನ್ನಾಡಿದರು. ಜಿ.ಎಸ್.ಎಸ್ ಅವರು ಪೂಜ್ಯರಿಗೆ ಶಾಲು ಹೊದಿಸಿ ಫಲ ಪುಷ್ಪಗಳನ್ನಿತ್ತು ನಮಸ್ಕರಿಸಿದರು. ನಂತರ ಪೂಜ್ಯರು ಶಿಷ್ಯನಿಗೆ ಶಾಲು ಹೊದಿಸಿ ಸನ್ಮಾನಿಸಿದರು. ಕುಟುಂಬಸಮೇತರಾಗಿ ಆಗಮಿಸಿದ್ದ ಜಿ.ಎಸ್.ಎಸ್. ರವರು ಪ್ರಸಾದ ಸ್ವೀಕರಿಸಿ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು. ಜೊತೆಯಲ್ಲಿ ಸಾಹಿತಿ, ಕೆ.ಮರುಳ ಸಿದ್ಧಯ್ಯನವರು ಹಾಗೂ ವಿದ್ವಾನ್ ಮೂಗೂರು ಶಿವಕುಮಾರ ಸ್ವಾಮಿಯವರು ಆಗಮಿಸಿದ್ದರು.

ದಿನಾಂಕ ೦೧-೧೧-೨೦೦೬ರಂದು ಶ್ರೀಮಠಕ್ಕೆ ಬೆಂಗಳೂರಿನ ಬಾಲಾಜಿ ಮಹಿಳಾ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿರುವ ನಗೆಗಾರ್ತಿ ಶ್ರೀಮತಿ ಸುಧಾ ಬರಗೂರು ಆಗಮಿಸಿದ್ದರು. ಅಂದು ಕನ್ನಡ ರಾಜ್ಯೋತ್ಸವವಾದ್ದರಿಂದ ಸಂಜೆ ಪ್ರಾರ್ಥನಾ ಸಭೆಯಲ್ಲಿ ನಕ್ಕು ನಲಿಸಿದರು. ನಗು ಗೆಲುವಿನ ಸಿದ್ಧೌಷಧ, ಇಂದು ದುಡ್ಡುಕೊಟ್ಟು ನಗಿಸುವ ಕ್ಲಬ್‌ಗಳಿವೆ. ಆದರೆ ನೀವು ನಿಮ್ಮ ಪರಿಸರದಲ್ಲಿಯೇ ಅನೇಕ ಕ್ಷಣಗಳು ನಗುವ ಸನ್ನಿವೇಶಗಳಿರುತ್ತವೆ. ಆಗ ನಕ್ಕು ನಲಿಯಬೇಕೆಂದು ಮಕ್ಕಳನ್ನು ನಗೆಗಡಲಿನಲ್ಲಿ ತೇಲಿಸಿದರು. ಹನ್ನೆರಡನೆಯ ಶತಮಾನದಲ್ಲಿದ್ದ ನಗೆಮಾರಚೆನ್ನಯ್ಯನ ಕಾಯಕ ಮನೆಮನೆಗೆ ಹೋಗಿ ನಗಿಸುವುದು. ಒಮ್ಮೆ ಶಿವ ಅವನನ್ನು ಪರೀಕ್ಷೆ ಮಾಡಲು ಕಲ್ಯಾಣಕ್ಕೆ ಬರುತ್ತಾನೆ. ಹೊಳೆಯ ತೀರದಲ್ಲಿ ನಗೆಮಾರ ಚೆನ್ನಯ್ಯ ಹೊಳೆ ದಾಟಲು ಕುಳಿತಿದ್ದಾನೆ. ಅಷ್ಟರಲ್ಲಿ ಶಿವ ಇವನು ನನ್ನನ್ನು ಹೇಗೆ ನಗಿಸುತ್ತಾನೆ ನೋಡೋಣ ಎಂದು ಚೆನ್ನಯ್ಯನನ್ನು ನೀನು ಈ ಹೊಳೆಯನ್ನು ಹೇಗೆ ದಾಟುತ್ತೀಯ ಎಂದು ಶಿವನನ್ನು ಪ್ರಶ್ನಿಸುತ್ತಾನೆ, ಆಗ ಶಿವ ನಾನು ನನ್ನ ವಾಹನ ಎತ್ತಿನ ಮೇಲೆ ಕುಳಿತುಕೊಳ್ಳುತ್ತೇನೆ, ನನ್ನ ಪತ್ನಿಯನ್ನು ನನ್ನ ಭುಜಗಳ ಮೇಲೆ ಕುಳ್ಳರಿಸಿಕೊಳ್ಳುತ್ತೇನೆ ಎಂದಾಗ, ನಗೆಮಾರ ಚೆನ್ನಯ್ಯ ನಾನು ನಿನ್ನ ಪತ್ನಿಯ ಹೆಗಲ ಮೇಲೆ ಕುಳಿತು ಕೊಳ್ಳುತ್ತೇನೆ ಎಂದು ಎಲ್ಲಾರನ್ನು ನಗಿಸುತ್ತಾನೆ, ಆಗ ಶಿವ ನನ್ನ ಜೊತೆ ಕೈಲಾಸಕ್ಕೆ ಬಾ ಎಂದು ಕರೆದಾಗ, ನನಗೆ ಈ ಕಲ್ಯಾಣವೇ ಕೈಲಾಸ, ನಾನು ಇಲ್ಲಿಯೇ ಸಂತೋಷವಾಗಿ ಎಲ್ಲರನ್ನು ನಗಿಸಿಕೊಂಡು ಇರುತ್ತೇನೆ ಎನ್ನುತ್ತಾನೆ. ಹಿಂದೆ ರಾಜರ ಆಸ್ಥಾನದಲ್ಲಿ ನಗಿಸುವ ವಿಧೂಷಕರೆ ಇರುತ್ತಿದ್ದರು. ತೆನಾಲಿರಾಮಕೃಷ್ಣ, ಬೀರ್‌ಬಲ್, ಟಿ.ಪಿ. ಕೈಲಾಸಂ ಮುಂತಾದವರನ್ನು ನೆನೆಯಬಹುದು ಎಂದು ತಿಳಿಸಿದರು.

ಬೆಂಗಳೂರಿನಿಂದ ಬಂಧಿದ್ದ ಶ್ರೀ ಬಸವರಾಜ ಹಿರೇಮಠ್ ರವರು ಜಾದುವನ್ನು ಮಾಡಿ ಮಕ್ಕಳನ್ನು ಸಂತೋಷ ಪಡಿಸಿದರು. ಪೂಜ್ಯ ಗುರುಗಳು ಇಬ್ಬರಿಗೂ ಶಾಲು ಹೊದಿಸಿ ಸನ್ಮಾನಿಸಿದರು. ಅಂದು ಬೆಂಗಳೂರಿನ ಸೇವ್ ಸಂಸ್ಥೆಯವರು ಎಲ್ಲಾ ಮಕ್ಕಳಿಗೆ ಸಿಹಿಲಾಡನ್ನು ಹಂಚಿದರು.

೦೯-೧೧-೨೦೦೬ರಂದು ಉಪಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಸಾಣೆಹಳ್ಳಿಗೆ ಹೋಗುವ ಮಾರ್ಗದಲ್ಲಿ ಶ್ರೀಮಠಕ್ಕೆ ಭೇಟಿಯಿತ್ತು ಗುರುಗಳ ಆಶೀರ್ವಾದ ಪಡೆದು ತೆರಳಿದರು. ❖

ಹೊಸದಹಾಗೆ ಹುರಿಗೊಳ್ಳುವ
ಗುರಿತಾಗುವ ಕನ್ನಡ ,
ಕುರಿತೋದದ ಪರಿಣತಮಗೆ
ಅರಿತವರಿಗೆ ಹೊಂಗೊಡ

ಪಡುಗಡಲಿನ ತೆರೆಗಳಂತೆ
ಹೆಡೆ ಬಿಚ್ಚುತ ಮೊರೆಯುವ
ಸಹ್ಯಾದ್ರಿಯ ಶಿಖರದಂತೆ
ಬಾನೆತ್ತರ ಕರೆಯುವ

-ಚೆನ್ನವೀರ ಕಣವಿ

# ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿ

## ದಾಸೋಹಕ್ಕೊಂದು ಅಪೂರ್ವ ಅವಕಾಶ

ಶ್ರೀಮಠದ ದಾಸೋಹಕ್ಕೆ ಒಂದು ಭವ್ಯ ಪರಂಪರೆ ಇದೆ, ಇತಿಹಾಸ ಇದೆ. ಶ್ರೀಮಠದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ತಮಿಳುನಾಡು ರಾಜ್ಯಗಳಿಂದ ವಿದ್ಯಾಭ್ಯಾಸಕ್ಕೆಂದು ಪ್ರತಿ ವರ್ಷ ನಿರೀಕ್ಷೆಗೂ ಮೀರಿ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ದಾಖಲಾಗುತ್ತಿದ್ದಾರೆ. ಪ್ರಸ್ತುತ ವಿದ್ಯಾರ್ಥಿಗಳ ಸಂಖ್ಯೆ 8000ಕ್ಕೂ ಮೀರಿದೆ. ಸರ್ವ ಧರ್ಮ ಸಮನ್ವಯಕ್ಕೆ ಉಜ್ವಲ ನಿದರ್ಶನವಾಗಿರುವ ಶ್ರೀಮಠದಲ್ಲಿ ಜಾತಿ, ಮತ, ವರ್ಗ ಬೇಧವಿಲ್ಲದೆ ಆಶ್ರಯ ನೀಡಲಾಗುತ್ತಿದೆ. ಇದೊಂದು ಪುಟ್ಟ ಭಾರತದಂತಿದೆ. ಅಲ್ಲದೇ ಪ್ರತಿದಿನ ಮಕ್ಕಳ ಪೋಷಕರೂ, ಯಾತ್ರಾರ್ಥಿಗಳೂ, ಭಕ್ತರು, ಅಭಿಮಾನಿಗಳು, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭೇಟಿ ನೀಡುತ್ತಿದ್ದಾರೆ. ಇವರೆಲ್ಲರಿಗೂ ಶ್ರೀಮಠದಲ್ಲಿ ದಾಸೋಹ ನಡೆಯುತ್ತಿದೆ. ಶ್ರೀಮಠಕ್ಕೆ ಹೇಳಿಕೊಳ್ಳುವಂತಹ ಆಸ್ತಿಯಾಗಲೀ, ಆರ್ಥಿಕ ಸಂಪನ್ಮೂಲಗಳಾಗಲೀ ಇಲ್ಲ. ಪರಮಪೂಜ್ಯ ಶ್ರೀ ಶ್ರೀಗಳವರ ತಪೋನಿಷ್ಠೆ, ಆತ್ಮಬಲ ಹಾಗೂ ಭಕ್ತರು, ಅಭಿಮಾನಿಗಳೂ ನೀಡುವ ಸಹಕಾರ, ಸಹಾಯದ ಮೇಲೆ ಈ ದಾಸೋಹ ನಿರಂತರವಾಗಿ ನಡೆದು ಬರುತ್ತಿದೆ. ಪ್ರತಿದಿನ ನಡೆಯುವ ಪವಿತ್ರವಾದ ದಾಸೋಹದ ಸೇವೆಯಲ್ಲಿ ತೊಡಗಿಸಿಕೊಳ್ಳುವ ಅಪೂರ್ವ ಅವಕಾಶವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಅನುಗ್ರಹಿಸಿದ್ದಾರೆ. ಈ ಪವಿತ್ರ ಯೋಜನೆಯಲ್ಲಿ ಯಾರು ಬೇಕಾದರೂ ಪಾಲ್ಗೊಳ್ಳಬಹುದು. ಕನಿಷ್ಠ ೨೦೦೦/–ರೂಗಳಿಗೆ ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹನಿಧಿಗೆ ನೀಡಿದರೆ ಇದನ್ನು ಶಾಶ್ವತ ನಿಧಿಯನ್ನಾಗಿ (ಎಫ್.ಡಿ.) ಇಟ್ಟು ಅದರ ಬಡ್ಡಿ ಹಣವನ್ನು ದಾಸೋಹಕ್ಕೆ ವಿನಿಯೋಗಿಸಲಾಗುವುದು. ದಾಸೋಹ ನಿಧಿಗೆ ಕೊಡುವ ಹಣಕ್ಕೆ **No.: DIT/E/80G** ಪ್ರಕಾರ ಆದಾಯ ತೆರಿಗೆ ವಿನಾಯಿತಿ ಇದೆ.

**ಈ ಮೇಲಿನ ಮನವಿಗೆ ಸ್ಪಂದಿಸಿ ಶ್ರೀ ಮಠದ ಈ ಪುಣ್ಯ ಯೋಜನೆಯ ದಾಸೋಹ ನಿಧಿಗೆ ಅರ್ಪಿಸಿರುವ ಮಹನೀಯರುಗಳು**

(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3755. | ಶ್ರೀ ಬಿ.ಎಸ್. ಪಾಟೀಲ್ ಮತ್ತು ಕುಟುಂಬ ವರ್ಗ ಅಶೋಕ ಸರ್ಕಲ್, ರಾಣೆಬೆನ್ನೂರು. | 2001.00 |
| 3756. | ಶ್ರೀ ಕಲ್ಪವೃಕ್ಷ, 'ನಂದಗೋಕುಲ' ಗಿರಿರಾಜ ಕಾಲೋನಿ, ಹರಿಹರ ತಾ॥ & ಪೊ. | 2001.00 |
| 3757. | ಶ್ರೀ ಟಿ.ಆರ್. ಮಂಜುನಾಥ ಬಿನ್ ರೇವಣ್ಣ ಎಸ್.ಐ.ಟಿ. ಮುಖ್ಯರಸ್ತೆ, ತುಮಕೂರು. | 2500.00 |
| 3758. | ಶ್ರೀ ಎನ್. ರೇಣುಕಾರಾಧ್ಯ, ಹಿಂದಿ ಶಿಕ್ಷಕರು, ಶ್ರೀ.ಸಿ.ಸ.ಉ.ಪ್ರೌ.ಶಾಲೆ, ಹಿರೇಹಳ್ಳಿ, ತು. ತಾ. | 3500.00 |
| 3759. | ಶ್ರೀ ಕೆ.ಎಂ. ರೇವಣ್ಣಸಿದ್ಧಯ್ಯ, ನಿ.ಪ್ರಾಂಶುಪಾಲರು. 12ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು. | 2000.00 |
| 3760. | ಮೆ॥ ಪರಿಸರ ಶಿಕ್ಷಣ ಕೇಂದ್ರ ದಕ್ಷಿಣ ವಲಯ ಘಟಕ, ಬೆಂಗಳೂರು. | 1001.00 |
| 3761. | ಶ್ರೀ ನಾಗರಾಜಗುಪ್ತ ಭಾರತ್ ಸ್ಟೋರ್ಸ್, ಸಂತೇಪೇಟೆ, ತಿಪಟೂರು. | 2001.00 |
| 3762. | ಅಧ್ಯಕ್ಷರು, ಸಿದ್ಧಗಂಗಾ ಇನ್ಸಿಟ್ಯೂಟ್ ಆಫ್ ಟೆಕ್ನಾಲಜಿ ಕನ್ಸೂಮರ್ಸ್ ಕೋ.ಆ.ಸೊಸೈಟಿ, ತುಮಕೂರು. | 2452.00 |
| 3763. | ತಾಯಿ ಮುದ್ದಮ್ಮ ಕೋಂ. ಮಣ್ಣೂರಪ್ಪ ಇರಕಸಂದ್ರ ಕಾಲೋನಿ, ಕೊರಟಗೆರೆ ತಾ॥ | 2002.00 |
| 3764. | ಶ್ರೀಮತಿ ಎಸ್. ಮಂಜುಳ ಟಿ.ಬಿ. ಮಹದೇವಯ್ಯ ಸ.ಹಿ.ಪ್ರಾ.ಶಾಲೆ, ಮಾಕನಹಳ್ಳಿ, ತುಮಕೂರು ತಾ. | 1001.00 |

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3765. | ಮೆ॥ ಯು.ಕೆ.ಎಸ್. ಸ್ಟಕ್ಚರ್ಸ್ ಲಿ., ಹೆಚ್.ಎ.ಎಲ್. 2ನೇ ಸ್ಟೇಜ್, ಇಂದಿರಾನಗರ, ಬೆಂಗಳೂರು. | 4000.00 |
| 3766. | ಶ್ರೀ ಸಾಸಲು ನಂಜುಂಡಪ್ಪನವರು, ನಿ.ರೆ.ಅ., 3ನೇ ಅಡ್ಡರಸ್ತೆ, ಕೆ.ಆರ್. ಬಡಾವಣೆ, ತುಮಕೂರು. | 10,000.00 |
| 3767. | ಶ್ರೀ ಎಸ್.ಪಿ. ಇಟಗಿ ಕೇರಾಫ್ ವೀಣ ಎಸ್.ಇಟಗಿ ಜ.ನ. ವಿದ್ಯಾಲಯ, ಕ್ಯಾರಕೊಪ್ಪ, ಧಾರವಾಡ. | 1000.00 |
| 3768. | ಶ್ರೀಮತಿ ಅನ್ನಪೂರ್ಣ ಮತ್ತು ಶ್ರೀ ವೀರಪ್ಪ ರಾಜಾಜಿನಗರ 5ನೇ ಬ್ಲಾಕ್, ಬೆಂಗಳೂರು | 1000.00 |
| 3769. | ಶ್ರೀ ಹೆಚ್. ಆರ್. ಶ್ರೇಯಸ್ ಬಿನ್ ಹೆಚ್.ವಿ.ಆರ್. ಪ್ರಸಾದ್ ರಾಜಾಜಿನಗರ 'ಡಿ' ಬ್ಲಾಕ್, 6ನೇ ಮುಖ್ಯರಸ್ತೆ, ಬೆಂಗಳೂರು | 2000.00 |
| 3770. | ಮೆ॥ ಎಸ್.ವಿ. ಮಾರ್ಕೆಟಿಂಗ್, 100ಅಡಿ ರಸ್ತೆ, ಬಿ.ಟಿ.ಎಂ. 2ನೇ ಸ್ಟೇಜ್, ಬೆಂಗಳೂರು. | 3000.00 |
| 3771. | ಶ್ರೀ ಪ್ರದೀಪ್‌ಗೂಳೂರು, ಬನಶಂಕರಿ 3ನೇಹಂತ, ಬೆಂಗಳೂರು | 10,000.00 |
| 3772. | ಶ್ರೀಮತಿ ಜ್ಯೋತಿ ಬಿ. ಪಂಥ್, ಉಪನ್ಯಾಸಕರು, ಶ್ರೀ.ಸಿ.ಶಿ. ವಿದ್ಯಾಲಯ, ಬಿ.ಹೆಚ್.ರಸ್ತೆ, ತುಮಕೂರು. | 8880.00 |
| 3773. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಹಿರಿಯ ಉಪನ್ಯಾಸಕರು. ಸಿವಿಲ್ ಇಂ. ವಿಭಾಗ, ಎಸ್.ಐ.ಟಿ., ತುಮಕೂರು, | 8500.00 |
| 3774. | ಶ್ರೀ ಟಿ.ಪಿ. ಸುಧೀರ್‌ಕುಮಾರ್, 6ನೇ ಕ್ರಾಸ್. 6ನೇ ಮೈನ್, ಹೆಚ್.ವಿ.ಆರ್. ಲೇಔಟ್, ಬೆಂಗಳೂರು | 1000.00 |





| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3775. | ಶ್ರೀ ಕೆ.ಆರ್. ಶರ್ಮಾ ಬಿ.ಎಸ್ಸಿ(ಎಜಿ) 2ನೇ ಮುಖ್ಯರಸ್ತೆ, ಜಯನಗರ 5ನೇ ಬ್ಲಾಕ್, ಬೆಂಗಳೂರು | 501.00 |
| 3776. | ಶ್ರೀ ಜಯರಾಮಯ್ಯ, ಕೋಆರ್ಡಿನೇಟರ್, ಟೀಕ್ ಉಳಿಮಾವು, ಬೆಂಗಳೂರು | 5001.00 |
| 3777. | ಶ್ರೀಮತಿ ಜಯಮ್ಮ ಬಸವಯ್ಯ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. | 50,000.00 |
| 3778. | ಶ್ರೀ ಸಿ.ಬಿ. ಕುಬೇರಪ್ಪ, 5ನೇ 'ಟಿ'ಬ್ಲಾಕ್, ಜಯನಗರ, ಬೆಂಗಳೂರು. | 6,501.00 |
| 3779. | ಶ್ರೀ ಚಲುವರಂಗಯ್ಯ, ಶ್ರೀ ಸಿದ್ಧಾರ್ಥ ಬಿ.ಇಡಿ. ಕಾಲೇಜು, ಹುಚ್ಚಗೊಂಡನಹಳ್ಳಿ, ತಿಪಟೂರು. | 2,001.00 |
| 3780. | ಶ್ರೀಮತಿ ಹುಚ್ಚಮ್ಮ ಮತ್ತು ಶ್ರೀ ಸಿದ್ಧೇಗೌಡ ಇವರ ಹೆಸರಿನಲ್ಲಿ ಶ್ರೀ ಎಂ. ಚಂದ್ರಶೇಖರಯ್ಯ, ನಿ.ಇಂಜನಿಯರ್ 2ನೇ ಸ್ಟೇಜ್, ರಾಜಾಜಿನಗರ, ಬೆಂಗಳೂರು. | 2,500.00 |
| 3781. | ಶ್ರೀಮತಿ ಗೀತಾ ಮೃತ್ಯುಂಜಯ, ಶಿಕ್ಷಕರು, ಗಟ್ಟೀಪುರ, ಮತ್ತೀಕೆರೆ ಅಂ., ಮಾಗಡಿ ತಾ॥ | 2,000.00 |
| 3782. | ಶ್ರೀ ಮಿಥುನ್ ಎನ್ ವನಜಾ ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 1,500.00 |
| 3783. | ಶ್ರೀ ಗೌತಮ್ ಬಿ.ಎಸ್. ಪ್ಯಾಲೇಸ್ ರಸ್ತೆ, ಚಕ್ರವರ್ತಿ ಲೇಔಟ್, ಬೆಂಗಳೂರು. | 8,800.00 |
| 3784. | ಲೇಟ್ ವೈ.ಎನ್. ನಂಜುಂಡಪ್ಪ ಮತ್ತು ಸರ್ವಮಂಗಳ ಇವರ ಜ್ಞಾಪಕಾರ್ಥವಾಗಿ ಶ್ರೀ ವೈ.ಎನ್. ರವಿಶಂಕರ್ ಮತ್ತು ಕುಟುಂಬವರ್ಗ, ಹಿನಕಲ್ ಅಂಚೆ, ವಿಜಯನಗರ, ಮೈಸೂರು. | 2002.00 |
| 3785. | ಶ್ರೀಮತಿ ಅಂಬಿಕಾ ಮಾರುತಿನಗರ, ನಾಗರಭಾವಿ ರಸ್ತೆ, ಬೆಂಗಳೂರು. | 10,551.00 |
| 3786. | ಶ್ರೀಮತಿ ಹನುಮಕ್ಕ ಕೋಂ. ಲಕ್ಷಣ, ತೋಟಗೆರೆ, ರೇಲ್ವೆಗೊಲ್ಲಹಳ್ಳಿ ಅಂ, ಬೆಂ.ಉ.ತಾ। | 5,000.00 |
| 3787. | ಶ್ರೀ ಎಲ್. ಶಿವಕುಮಾರಸ್ವಾಮಿ, ಮು.ಶಿ. ಶ್ರೀ.ಸಿ.ಸಂ.ಪಾ.ಶಾ., ರಾಮಗೊಂಡನಹಳ್ಳಿ, ತುಮಕೂರು ತಾ. | 1,000.00 |
| 3788. | ಶ್ರೀಮತಿ ರತ್ನಸಂಪತ್, 4ನೇ ಕ್ರಾಸ್, ತ್ರಿವೇಣಿ ರಸ್ತೆ, ಯಶವಂತಪುರ, | 2,001.00 |
| 3789. | ಶ್ರೀ ಜಿ. ವಿಶ್ವನಾಥ, ಮೂಡಲಪಾಳ್ಯ, ನಾಗರಭಾವಿ ರಸ್ತೆ, ಬೆಂಗಳೂರು. | 3,001.00 |
| 3790. | ಶ್ರೀ ಜಿ. ಶಿವಮೂರ್ತಿ ಬಿನ್ ಬಿ. ಶಾಂತಪ್ಪ, ಬಾಲರಾಜು ಅರಸು ರಸ್ತೆ, ಶಿವಮೊಗ್ಗ. | 3,000.00 |
| 3791. | ಶ್ರೀ ಇ. ಲೋಕೇಶ್ವರಪ್ಪ, ವಕೀಲರು, ವಿನಾಯಕನಗರ, ತುಮಕೂರು. | 2,001.00 |

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3792. | ಶ್ರೀ ವೀರಭದ್ರಪ್ಪ ಈರಪ್ಪ, ಅಂಚೆ ಬಾಗಲಕೋಟೆ | 15,000.00 |
| 3793. | ಶ್ರೀ ರಾಜಣ್ಣ ಆರ್. ಮತ್ತು ಶ್ರೀಮತಿ ಶಾರದಮ್ಮ ಚಿಕ್ಕಹೆಜ್ಜಾಜಿ, ದೊಡ್ಡಬಳ್ಳಾಪುರ ತಾ., ಬೆಂ.ಜಿ. | 5,001.00 |
| 3794. | ಶ್ರೀ ಮಾದಪ್ಪ ಮಲ್ಲಿಕಾರ್ಜುನಸ್ವಾಮಿ, ಮತ್ತು ಕುಟುಂಬವರ್ಗ ಲಿಂ. ಶ್ರೀಮತಿ ನೀಲಮ್ಮ ಇವರ ಸ್ಮರಣಾರ್ಥ ರಾಮಾನುಜ ರಸ್ತೆ, ಮೈಸೂರು. | 2,005.00 |
| 3795. | ಶ್ರೀ ಈರಯ್ಯ ಇ.ಡಬ್ಲ್ಯೂ.ಎಸ್. 2ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು. | 15,000.00 |
| 3796. | ಶ್ರೀ ಕೆ.ಟಿ. ಅಂಕಾರೆಡ್ಡಿ, ಕಗ್ಗದಾಸಪುರ ಮುಖ್ಯರಸ್ತೆ, ಸರ್.ಸಿ.ವಿ. ರಾಮನ್‌ನಗರ, ಬೆಂಗಳೂರು. | 2,001.00 |
| 3797. | ಶ್ರೀ ಎಸ್.ಬಿ. ರುದ್ರಪ್ಪ, ಸೆಕ್ಷನ್ ಆಫೀಸರ್, ಕ.ಗೌ.ಸ.ಹ. ವಿಭಾಗ, ವಿಧಾನಸೌಧ, ಬೆಂಗಳೂರು. | 5,001.00 |
| 3798. | ಶ್ರೀ ಹೆಚ್.ಜಿ. ಚೆನ್ನಪ್ಪನವರು ಮತ್ತು ಮಕ್ಕಳು, ನಿ.ಮು.ಶಿ. ಗೋಣಿಪುರ, ಕುಂಬಳಗೋಡು, ಬೆಂ.ದ. ತಾ॥ | 10,000.00 |
| 3799. | ಶ್ರೀ ಬಿ.ಸಿ. ಶಿವಾನಂದ 874, 38ನೇಕ್ರಾಸ್, 'ಟಿ' ಬ್ಲಾಕ್, ಜಯನಗರ, ಬೆಂಗಳೂರು. | 1,000.00 |
| 3800. | ಶ್ರೀ ಅಣ್ಣೆಗೌಡ ಬಾಳ್ಳುಪೇಟೆ, ಬನವಾಸಿ, ಹಾಸನ ಜಿಲ್ಲೆ. | 1,010:00 |
| 3801. | ಶ್ರೀ ಪ್ರಸಾದ್, ಹಿ.ಶ್ರೇ. ಉಪನ್ಯಾಸಕರು, ಎಸ್.ಐ.ಟಿ. ಕಾಲೇಜು, ತುಮಕೂರು. | 8,500.00 |
| 3802. | ಡಾ॥ ಕೆಂಪಣ್ಣ ಸುಧಾಕರ್ ಮತ್ತು ಗಂಗಾಸುಧಾಕರ್ ಅವೆನ್ಯೂ, ಟಹೋಮ ಪಾರ್ಕ್, ಎಂ.ಡಿ. | 5,001.00 |
| 3803. | ಶ್ರೀ ಗೊಗ್ಗ ಶರಬಯ್ಯ, ಮೈನ್ ಓನರ್, ಎನ್.ಸಿ. ಕಾಲೋನಿ, ಹೊಸಪೇಟೆ, ಬಳ್ಳಾರಿ ಜಿ. | 2,001.00 |
| 3804. | ಶ್ರೀ ಹೆಚ್.ಸಿ. ಜಯಣ್ಣ, ದ್ವಿದ.ಸ. ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ಬಿ.ಹೆಚ್.ರಸ್ತೆ, ತುಮಕೂರು. | 500.00 |
| 3805. | ಶ್ರೀ ಬಿ. ಚಂದ್ರಪ್ಪ, ದ್ವಿದ.ಸ. ಡಿಟೋ ಕಾಲೇಜು | 1,500.00 |
| 3806. | ಶ್ರೀ ಎನ್.ಪಿ. ನರೇಂದ್ರಬಾಬು. ದ್ವಿದ.ಸ. ಡಿಟೋ ಕಾಲೇಜು | 1,500.00 |
| 3807. | ಶ್ರೀಮತಿ ಪ್ರೇಮ, ಸಿ.ಸಿ.ಟಿ., ಡಿಟೋ ಕಾಲೇಜು | 1,500.00 |
| 3808. | ಶ್ರೀ ಎ.ಎಸ್. ವಿರೂಪಾಕ್ಷಯ್ಯ, ಲೈಬ್ರರಿ ಸಹಾಯಕರು, ಡಿಟೋ ಕಾಲೇಜು | 1,000.00 |
| 3809. | ಶ್ರೀ ಹೆಚ್.ವಿ. ಸಿದ್ದೇಶ್, ಅಟೆಂಡರ್, ಡಿಟೋ ಕಾಲೇಜು | 1,500.00 |

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3810. | ಶ್ರೀ ಉಮಾಶಂಕರ್, ಅಟೆಂಡರ್, ಡಿಟೋ ಕಾಲೇಜು | 1,500.00 |
| 3811. | ಶ್ರೀ ಎಂ. ಜಯಶಂಕರ್, ಅಟೆಂಡರ್, ಡಿಟೋ ಕಾಲೇಜು | 1,500.00 |
| 3812. | ಶ್ರೀ ಬೈರಣ್ಣ, 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3813. | ಶ್ರೀ ಕೆ.ಜಿ. ಮಲ್ಲಿಕಾರ್ಜುನಯ್ಯ, 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3814. | ಶ್ರೀ ಶಿವಶಂಕರಯ್ಯ, 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3815. | ಶ್ರೀ ಎಸ್.ಸಿದ್ಧರಾಮಯ್ಯ, 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3814. | ಶ್ರೀಮತಿ ಡಿ.ಆರ್. ರೇಣುಕಾಂಬ 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3815. | ಶ್ರೀಮತಿ ಜಿ. ಸರೋಜ, 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3816. | ಶ್ರೀಮತಿ ಸಿ.ಸಿದ್ಧಮ್ಮ, 'ಡಿ' ಗ್ರೂಫ್ ನೌಕರರು, ಡಿಟೋ ಕಾಲೇಜು | 1,100.00 |
| 3817. | ಶ್ರೀಮತಿ ಹೆಚ್.ಡಿ. ಗಂಗಮ್ಮ, ಅಟೆಂಡರ್, ಡಿಟೋ ಕಾಲೇಜು | 1,500.00 |
| 3818. | ಶ್ರೀ ಕೆ.ಸಿ. ಮಹದೇವಯ್ಯ, ಅಟೆಂಡರ್, ಡಿಟೋ ಕಾಲೇಜು | 1,500.00 |
| 3819. | ಶ್ರೀ ಎನ್. ಪ್ರಕಾಶ್, ಅಟೆಂಡರ್, ಡಿಟೋ ಕಾಲೇಜು | 1,500.00 |
| 3820. | ಶ್ರೀ ಹೆಚ್.ಎಸ್. ಪಾಲನೇತ್ರ, ಅಟೆಂಡರ್, ಡಿಟೋ ಕಾಲೇಜು | 1,500.00 |
| 3821. | ಶ್ರೀಮತಿ ಸುನಂದ, ಅಟೆಂಡರ್, ಡಿಟೋ ಕಾಲೇಜು | 1,500.00 |
| 3822. | ಶ್ರೀ ಶಿವಲಿಂಗಯ್ಯ, ಗ್ರೂಪ್ 'ಡಿ' ನೌಕರರು ಡಿಟೋ ಕಾಲೇಜು | 1,500.00 |
| 3823. | ಶ್ರೀ ಹೆಚ್.ಎಸ್. ಶಿವಲಿಂಗಯ್ಯ, ಅಟೆಂಡರ್, ಡಿಟೋ ಕಾಲೇಜು | 1,500.00 |
| 3824. | ಶ್ರೀ ಮುನಿರಾಜು, ಗ್ರೂಪ್ 'ಡಿ' ನೌಕರರು ಡಿಟೋ ಕಾಲೇಜು | 1,500.00 |
| 3825. | ಶ್ರೀಮತಿ ಎಲ್. ಶಿವಮ್ಮ, ಡಿಟೋ ಕಾಲೇಜು | 1,500.00 |
| 3826. | ಶ್ರೀ ಬಿ.ಸಿ. ಪರಮಶಿವಯ್ಯ, ಗ್ರೂಪ್ 'ಡಿ' ನೌಕರರು ಡಿಟೋ ಕಾಲೇಜು | 1,000.00 |
| 3827. | ಶ್ರೀ ಎಂ. ಮಲ್ಲಪ್ಪ, ಬ್ರಾಂಚ್ ಮ್ಯಾನೇಜರ್, ಇಂಡಿಯನ್ ಬ್ಯಾಂಕ್, ಧಾರವಾಡ. | 1,001.00 |
| 3828. | ಶ್ರೀಮತಿ ಉಷಾರಾಣಿ, 7ನೇ ಫೇಸ್, ಜೆ.ಪಿ. ನಗರ, ಬೆಂಗಳೂರು. | 2,001.00 |
| 3829. | ಶ್ರೀ ಹೆಚ್.ಆರ್. ವೀರಭದ್ರಯ್ಯ, 14ನೇ ಮೈನ್, ಸುಬ್ರಮಣ್ಯನಗರ, ಬೆಂಗಳೂರು. | 2,001.00 |
| 3830. | ಶ್ರೀಮತಿ ಪದ್ಮಜ ಕೋಂ. ಎಂ.ಸಿ. ಪ್ರಸನ್ನ 2ನೇ ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು. | 21,000.00 |
| 3831. | ಶ್ರೀ ಗಂಗಾಧರಪ್ಪ, ಸಹಶಿಕ್ಷಕರು, ಶ್ರೀ ಸಿ.ಸಂ.ಪ.ಪೂ.ಕಾ., ಬೂದಿಗೆರೆ, ದೇವನಹಳ್ಳಿ, ಬೆಂ. ಗ್ರಾ.ಜಿಲ್ಲೆ. | 1,000.00 |
| 3832. | ಶ್ರೀ ಜೆ.ಪಿ. ವೀರಭದ್ರಪ್ಪ, ಹೊಸಕೋಟೆ, ಬೆಂಗಳೂರು ಗ್ರಾ.ಜಿಲ್ಲೆ. | 1,115.00 |
| 3833. | ಶ್ರೀ ಸಿ. ರಾಮಚಂದ್ರ ಮತ್ತು ಶ್ರೀ ಎಂ. ಸುರೇಶ್ ವಿವೇಕಾನಂದ ಕಾಲೋನಿ, ಕೆ.ಪಿ. ರಸ್ತೆ, ಬೆಂಗಳೂರು. | 10,005.00 |
| 3834. | ಶ್ರೀ ಎಂ. ಬಸವರಾಜಪ್ಪ, ಬಿನ್ ಲಿಂ. ಬಿ.ಮುರುಗಪ್ಪ ವಕೀಲರು, ಪೊ., ಭದ್ರಾವತಿ ತಾ, ಶಿವಮೊಗ್ಗ ಜಿ. | 1,000.00 |
| 3835. | ಶ್ರೀಮತಿ ರತ್ನಮ್ಮ ಮತ್ತು ಶ್ರೀ ಟಿ.ವಿ. ಚಂದ್ರಶೇಖರಯ್ಯ ತರಿದಾಳು, ಗೌರಿಬಿದನೂರು ತಾ॥ ಕೋಲಾರ ಜಿ. | 2,000.00 |
| 3836. | ಶ್ರೀ ಎಸ್. ಸಿದ್ಧಲಿಂಗಪ್ಪ, ಆಜಾದ್‌ನಗರ, ಚಾಮರಾಜಪೇಟೆ, ಬೆಂಗಳೂರು. | 2,000.00 |
| 3837. | ಶ್ರೀ ಪೊಂಪನಗೌಡ ಕೆ. ಇಬ್ರಾಹಿಂಪುರ ಮತ್ತು ಅದೇ ಪೊ. ಬಳ್ಳಾರಿ ತಾ॥ | 1,001.00 |
| 3837. | ಶ್ರೀ ಎಸ್.ಬಿ. ಶಿವಕುಮಾರಯ್ಯ ಬಿನ್ ಶ್ರೀ ಬಸವಣ್ಣ ಹೊಂಗಸಂದ್ರ, ಮೈಕೋ ಲೇಔಟ್, ಬೆಂಗಳೂರು. | 2,101.00 |
| 3838. | ಶ್ರೀ ಆರ್.ಸಿ. ವಿಮಲಾದೇವರಾಜ್ ಮತ್ತು ಮಕ್ಕಳು ಜೆ.ಪಿ. ನಗರ, 5ನೇ ಹಂತ, ಬೆಂಗಳೂರು. | 2,100.00 |
| 3839. | ಶ್ರೀ ಡಿ.ಹರೀಶ್‌ಕುಮಾರ್ ಮತ್ತು ಕಿಶೋರ್‌ಕುಮಾರ್ ಡಾ॥ ಡಿ.ಮಮತ್ ಮತ್ತು ಡಾ॥ ನವೀನ್ ಜೆ.ಸಿ.ನಗರ, 5ನೇ ಹಂತ, ಬೆಂಗಳೂರು. | 2,100.00 |
| 3840. | ಶ್ರೀ ಎಂ.ಜಿ. ಜಿತೇಂದ್ರ ಸುಲ್ತಾನ್‌ಪಾಳ್ಯ, ಆರ್.ಟಿ.ನಗರ ಅಂ., ಬೆಂಗಳೂರು. | 2,001.00 |
| 3841. | ಶ್ರೀ ಜಿ. ಪರಮೇಶ್ವರಪ್ಪ ಬಿನ್ ಲೇ। ಗಂಗಪ್ಪ ಬನಶಂಕರಿ 3ನೇ ಫೇಸ್, ಬೆಂಗಳೂರು. | 3,001.00 |
| 3842. | ಶ್ರೀ ಎಸ್. ಮೃತ್ಯುಂಜಯ, ಸರಸ್ವತಿ ನಗರ, ವಿಜಯನಗರ, ಬೆಂಗಳೂರು. ಲಿಂ. ಶ್ರೀ ಡಿ. ಸಿದ್ಧಲಿಂಗಪ್ಪ ಮತ್ತು ಲಿಂ. ಚಿಕ್ಕಗುರುಸಿದ್ದಪ್ಪ ಇವರ ಸ್ಮರಣಾರ್ಥ | 10,001.00 |
| 3843. | ಶ್ರೀ ಬಿ.ಎಂ. ಮುರಿಗೆಯ್ಯ ಕುರ್ಕಿ ಅಂಚೆ, ದಾವಣಗೆರೆ ತಾ&ಜಿ. | 10,001.00 |
| 3844. | ಶ್ರೀ ಜಿ. ಪ್ರಭಾಕರರೆಡ್ಡಿ ಬಿನ್ ಚೆನ್ನಮಲ್ಲರೆಡ್ಡಿ ಟಿ.ವೀರಾಪುರ ಅಂ., ರಾಯದುರ್ಗ ತಾ॥ ಅನಂತಪುರ ಜಿಲ್ಲೆ, ಆಂಧ್ರಪ್ರದೇಶ. | 5,005.00 |
| 3845. | ಶ್ರೀ ಬಿ.ಸಿ. ಶಿವಾನಂದ, 38ನೇಕ್ರಾಸ್,'ಟಿ' ಬ್ಲಾಕ್, ಜಯನಗರ, ಬೆಂಗಳೂರು. | 1,500.00 |
| 3846. | ಶ್ರೀ ಭದ್ರಯ್ಯ ನಂ.86, 8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು. | 15,000.00 |

(ಮುಂದುವರಿಯುತ್ತದೆ)



ತಿಪಟೂರು ತಾಲ್ಲೂಕು ನೊಣವಿನಕೆರೆಯಲ್ಲಿ ನವೆಂಬರ್ ೧೦ ರಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗುರುವಂದನಾ ಕಾರ್ಯಕ್ರಮ ನಡೆಯಿತು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಕರಿಬಸವ ದೇಶಿಕೇಂದ್ರ ಸ್ವಾಮಿಗಳು, ಶಾಸಕ ಶ್ರೀ ವಿ. ಸೋಮಣ್ಣ, ಶ್ರೀ ಎನ್.ಆರ್. ಜಯದೇವಮೂರ್ತಿ ಮೊದಲಾದವರು ಉಪಸ್ಥಿತರಿದ್ದರು



ಉಪ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಶ್ರೀ ಶ್ರೀಗಳವರ ದರ್ಶನ ಭಾಗ್ಯ ಪಡೆದರು. ಈ ಸಂದರ್ಭದಲ್ಲಿ ಶಾಸಕ ಶ್ರೀ ಎಸ್. ಶಿವಣ್ಣ, ಚಿತ್ರನಟ ಶ್ರೀ ದೊಡ್ಡಣ್ಣ, ನಗರಸಭಾ ಅಧ್ಯಕ್ಷೆ ಶ್ರೀಮತಿ ಸರೋಜಾಬಾಯಿ ಅವರು ಉಪಸ್ಥಿತರಿದ್ದರು.



ಇತ್ತೀಚೆಗೆ ಮುಕ್ತ ಧಾರವಾಹಿ ಖ್ಯಾತಿಯ ಶ್ರೀ ಟಿ.ಎನ್. ಸೀತಾರಾಮ್ ಮತ್ತು ತಂಡದವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀ ಗಳವರ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಭೂಮಿ ಬಳಗದ ಅಧ್ಯಕ್ಷ ಶ್ರೀ ಜಿ.ಎಸ್. ಸೋಮಶೇಖರ್‌ರವರು ಹಾಜರಿದ್ದರು.



ತುಮಕೂರು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದ ಶ್ರೀ ಎಸ್. ಷಫಿ ಅಹಮದ್‌ರವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಶ್ರೀ ನಾರಾಯಣಮೂರ್ತಿ, ಶ್ರೀ ಜಿ. ರಾಜು ಮೊದಲಾದವರು ಹಾಜರಿದ್ದರು.



ಅಕ್ಟೋಬರ್ ೨೭ ರಂದು ಹಿರೇಹಳ್ಳಿ ಸಮೀಪದಲ್ಲಿರುವ ಪಂಡಿತನಹಳ್ಳಿಯಲ್ಲಿ ಶ್ರೀ ಭಾಗ್ಯಜ್ಯೋತಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡದ ಶಂಖು ಸ್ಥಾಪನೆಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ನೆರವೇರಿಸಿದರು. ಈ ಸಂದರ್ಭದಲ್ಲಿ ಶ್ರೀ ಬಿ.ಜಿ. ಕೃಷ್ಣಯ್ಯ ಮೊದಲಾದವರು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನಲ್ಲಿ 'ಜೈವಿಕ ತಂತ್ರಜ್ಞಾನ' ಪ್ರಯೋಗಾಲಯವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪ್ರೊ. ಡಿ. ಮಂಜುನಾಥ ಅಡಿಗ, ಸಂಯೋಜಕರಾದ ಡಾ. ನಾಗಭೂಷಣರವರು ಹಾಜರಿದ್ದರು.